# ಹೆಸರಿಟ್ಟರು

(ಒಂಬತ್ತು ಕಥೆಗಳು)

ವೈ. ಎಂ. ಷಣ್ಮುಖಯ್ಯ

ಮಾರಾಟಗಾರರು :

ಸತ್ಯಶೋಧನ ಪುಸ್ತಕ ಭಂಡಾರ

ಕೋಟೆ, ಬೆಂಗಳೂರು ನಗರ

೧೯೪೬

ಬೆಲೆ : ೧-೪-೦

ಈ ಪುಸ್ತಕದಲ್ಲಿ ನಾನು ಈಚೆಗೆ ಬರೆದ ಕೆಲವು ಕಥೆ ಸೇರಿವೆ. ಇವುಗಳನ್ನು, ನನ್ನಲ್ಲಿ ಅಭಿಮಾನವಿಟ್ಟ ಶ್ರೀ ತೀ. ನಂ. ಶ್ರೀಕಂಠಯ್ಯನವರು ಓದಿ, ಉತ್ತಮ ಸಲಹೆಯಿತ್ತರು ಕಾಗದ ದೊರೆಯದ ಈ ಕಾಲದಲ್ಲಿ, ಮೈಸೂರ್ ಪೇಪರ್ ಮಿಲ್ಸ್ ಸೆಕ್ರೆಟರಿ, ಶ್ರೀ ಎಚ್. ಆರ್. ವೇದಾಂತ ಅಯ್ಯಂಗಾರರ ಕೃಪೆಯಿಂದ ಕಾಗದ ದೊರೆಯಿತು. ಈ ಮಹನೀಯರುಗಳಿಗೆ ನಾನು ಅತಿ ಕೃತಜ್ಞನಾಗಿದ್ದೇನೆ ಈ ಪುಸ್ತಕವನ್ನು ಹೊರಕ್ಕೆ ತರಲು ವಿಶೇಷ ರೀತಿಯ ನೆರವಿತ್ತ ಸತ್ಯಶೋಧನ ಪುಸ್ತಕ ಭಂಡಾರಕ್ಕೂ ನನ್ನ ಅನೇಕ ವಂದನೆಗಳು.

ಬೆಂಗಳೂರು.
15-3-1946

ವೈ. ಎಂ. ಷಣ್ಮುಖಯ್ಯ.

## ಕ ಥಾ ನು ಕ್ರ ಮ


| | | |
|---|---|---|
| ೧ | ಹೆಸರಿಟ್ಟರು | ೧–೮ |
| ೨ | ಸ್ವರ್ಣಮುಖಿ | ೯–೧೭ |
| ೩ | ಬಾಡಿಗೆ ಮನೆ | ೧೮–೨೯ |
| ೪ | ಮಾನವಂತ | ೩೦–೩೬ |
| ೫ | ನಾರಿ | ೩೭–೪೪ |
| ೬ | ಹೆಣ್ಣು–ದೆವ್ವ | ೪೫–೫೨ |
| ೭ | ಇಂದುವನ್ನು ನೆನೆದುಕೊಳ್ಳಲಿಲ್ಲ | ೫೩–೮೮ |
| ೮ | ರಂಗಿ ರಂಬಿಯಾಗಿದ್ದಾಳೆ | ೮೯–೯೭ |
| ೯ | ಕನಸಿನ ಬದುಕು | ೯೮–೧೩೦ |

# ಹೆಸರಿಟ್ಟರು

---

ಹೆಂಡತಿ-ಯಾವಾಗ ಬಂದ್ರಿ? ಇಷ್ಟೊತ್ತು ಮಾಡಿಕೊಂಡು ಬರೋದೇ?

ಗಂಡ-ಏನಿವತ್ತು?....ತಣ್ಣೀರು ಸ್ನಾನ ಮಾಡಿದವರಹಾಗೆ ಕುಣೀತಾ ಇದ್ದೀಯಲ್ಲ!

ಹೆಂ—ಆಸ್ಪತ್ರೆಗೆ ಹೋಗಿದ್ದೆವು.

ಗಂ-ಓಹೋ! ನಿಮ್ಮನ್ನೆಲ್ಲ ಪರೀಕ್ಷೆ ಮಾಡೋದಿನವೋ?

ಹೆಂ-ಗೊತ್ತಿಲ್ಲವೇನೋ?

ಗಂ—ಏನು ಹೇಳಿದ್ರು ಡಾಕ್ಟ್ರು?

ಹೆಂ-ಸುಮ್ಮನಿದ್ರು.

ಗಂ-ಆಮೇಲೆ?

ಹೆಂ—ದೊಡ್ಡಮ್ಮ ಬಂದಿದ್ರು.

ಗಂ—ಸರಿ.

ಹೆಂ—ಮನೆಗೆ ಕರಕೊಂಡುಹೋದ್ರು. ಊಟ ಆಯಿತು. ಹೊಸ ಸೀರೆ ಕಳಿಸಿದಾರೆ, ಇಲ್ಲಿದೆ ನೋಡಿ.

ಗಂ-ಓ! ಅದಕ್ಕೇನೇ ನೀನು ಹೀಗೆ ಗಿಣಿಮರಿಹಾಗೆ ಚಿಲಿಪಿಲಿಗುಟ್ಟುತ್ತ ಇರೋದು. ಸುಮಾರಾಗಿದೆ, ಪರವಾಗಿಲ್ಲ; ಆಯಿತು. ಅವಳೆಲ್ಲಿ ಮುಕ್ತಾಯಿ?

ಹೆಂ-ಅವಳೆಲ್ಲೊ ಆಡೋಕೆ ಹೊರಗೆ ಹೋಗಿರಬೇಕು. ಅವಳಿಗೊಂದು ನಾಯಿಮರಿ ಬೇಕೂ ಅಂತ ಬೆಳಗಿನಿಂದ ರಂಪ.

ಗಂ—ಯಾಕೆ, ಒಂದು ಕೋತಿಮರಿ ಬೇಡವಂತಾ? ಕೋತಿಮರಿ ಇದ್ದರೆ ಚೆಂದ. ನೋಡು, ಅಲ್ಲಿಗೆ ಎರಡಾಗುತ್ತವೆ.

ಹೆಂ-ಸಾಕುಮಾಡಿ. ಒಂದು ಪುಟ್ಟ–ಚೆಂದಾಗಿರೋ–ನಾಯಿ-

ಗಂ-"ಕುನ್ನಿ ಬೇಕು" ಅನ್ನು.

ಹೆಂ-ಹೋಗಿ!

ಗಂ-ಈಗ, ಎರಡು ದೊಡ್ಡವು-ಒಂದು ಮರಿ–ಹೀಗೆ ಮೂರು ಇದ್ದೇವೆ. ಆದರಜೊತೆಗೆ ನಾಯಿಮರಿ ಒಂದು! ಬೇಡ, ಸಾಕು. ಅಲ್ಲದೆ, ಸದ್ಯದಲ್ಲೇ ಇನ್ನೊಂದು ಪುಟ್ಟಜೀವ ಈ ನಮ್ಮ ಪುಟ್ಟ ಗುಡಿಸಲಿನಲ್ಲಿ ಹೆಚ್ಚಾಗೋದಿದೆ. ಈ ಪುಟ್ಟ ಸಂಸಾರದಲ್ಲಿ ನಾಲ್ಕುಜೀವ ಇರೋಕೆ ಸಾಕು.

ಹೆಂ-ಆದೆಲ್ಲ ಇರ್‍ಲಿ. ನಾಳೆ ಸಾಯಂಕಾಲ ಕಂಟೋನ್ಮೆಂಟಿಗೆ ಹೋಗಿ ಒಂದು ಚೆನ್ನಾಗಿರೋ ಮರಿ, ಬಿಳೀ ಬಣ್ಣದ್ದು, ಮುದ್ದಾಗಿರಬೇಕು —

ಗಂ-ನಿನ್ನ ಹಾಗೋ, ನಿನ್ನ ಮಗಳು ಮುಕ್ತಾಯಿಯ ಹಾಗೋ?

ಹೆಂ-ನನಗೆ ರೇಗ್ತದೆ.

ಗಂ–ನಾಯಿಮರಿ ಮುದ್ದಾಗಿರಬೇಕು ಅಂತೀಯ!

ಹೆಂ- ಅದೇನು ಆ ಕಾಗದ?

ಗಂ-ತಂದೆ ಕಾಗದ ಬರೆದಿದ್ದಾರೆ. ಹೆರಿಗೆಗೆ ನಿನ್ನ ಅಲ್ಲಿಗೆ ಕಳುಹಿಸಿಕೊಡಬೇಕು ಅಂತ.

ಹೆಂ–ಆ ಕೊಂಪೇಲಿ! ಏನಾದ್ರೂ ಹೆಚ್ಚುಕಡಿಮೆ ಆದ್ರೆ ಯಾರು ನೋಡಪ್ಪ? ನನಗೆ ಆಳೂಸೆ ಬಂದುಬಿಡ್ತದೆ ನಿಮ್ಮನ್ನ ಬಿಟ್ಟು ಅಷ್ಟು ಕಾಲ–ಅಷ್ಟುದೂರ ಇರಬೇಕಂದ್ರೆ.

ಗಂ–ಯಾಕೆ ಊರು ಚೆನ್ನಾಗಿಲ್ಲವೆ? ಕೆರೆ ಇವೆ, ತೊರೆ ಇದೆ, ಕಾನನ-ಕಮಲ ಏನಿಲ್ಲ ಅಲ್ಲಿ!

ಹೆಂ–ಕವಿತೆ ಶುರು ಆಯಿತು. ಅಲ್ಲಿಯವಳನ್ನೆ-ಕೆರೆ ತೊರೆಗಳಲ್ಲಿ ಸುಳಿದಾಡೋ ಚೆನ್ನೆ ಒಬ್ಬಳನ್ನೆ ಮದುವೆ ಆಗಬೇಕಾಗಿತ್ತು!

ಗಂ-ಏನ ಮಾಡುವುದು! ಹರಿಹರಬ್ರಹ್ಮಾದಿಗಳಿಗೆ ಅಳವಡದ ವಿಧಿ ನನಗೂ ನಿನಗೂ ಗಂಟುಹಾಕಿತು.

ಹೆಂ-ಹಾಗಾದ್ರೆ ನಾನು ಅಷ್ಟು ಬೇಡ ಅನ್ನಿ ಈಗ?

ಗಂ-ಅಷ್ಟು ಖಂಡಿತವಾಗಿ ಹೇಳಲಾರೆ.

ಹೆಂ-ಹಾಗೋ? ಗಂಡಸರನ್ನು ನಂಬಬಾರದು.

ಗಂ-ಮುಕ್ತಾಯಿ ಬರಲಿಲ್ಲವಲ್ಲ?

ಹೆಂ-ನೋಡಿ, ನನ್ನ ಮಗಳ ಮೇಲಿರೋ ಪ್ರೀತಿ ನನ್ನ ಮೇಲಿಲ್ಲವಲ್ಲ! ಅವಳು ಬರೋದು ಒಂದು ನಿಮಿಷ ತಡವಾದರೆ ಕನವರಿಸುತ್ತೀರಲ್ಲ!

ಗಂ-ಎಲ್ಲಿ ಹೋಗಿದ್ದಾಳೆ ಹೇಳು ಅಂದ್ರೆ ಪುರಾಣ ಎಲ್ಲ ತೆಗೀತೀಯು.

ಹೆಂ-ದೊಡ್ಡಮ್ಮನ ಮಕ್ಕಳು ಬಂದಿದ್ರು-ಅವ್ರೇಲ್ಲೋ ಕರೆದುಕೊಂಡು ಹೋಗಿರಬೇಕು. ಅವಳ ಹೆಸರನ್ನು ಜನರು ಏನೇನು ತರಹ ಕೂಗ್ತಾರೆ! ಕೆಲವರು "ಮುತ್ತಾಯಿ" "ಮುಕ್ಕುತಾಯಿ" ಅಂತಾರೆ; ಅವಳ ನಾಮಕರಣದಲ್ಲಿ ಆ ಹೆಸರು ಬೇಡ ಅಂತ ಹೇಳಿದೆ; ನನ್ನ ಮಾತು ಎಲ್ಲಿ ಕೇಳ್ತೀರಿ! ಇನ್ನು ಮುಂದೆ ಹುಟ್ಟೋ ಮಗೂಗಾದ್ರು ಒಳ್ಳೇ ಹೆಸರಿಡಬೇಕು. ಹುಟ್ಟೋ ಮಗುವಿನ ಹೆಸರು ಈಗಲೇ ನಿರ್ಧರಿಸಿಟ್ಟುಕೊಂಡಿದ್ದು ಆ ಮೇಲಿಟ್ಟರೆ ಆ ಮಗುವಿಗೆ ಬಹಳ ಒಳ್ಳೆ ದೆಸೆ ಅಂತೆ. ನಾವೂ ಒಂದು ಹೀಗೆ ಆರಿಸಿಟ್ಟಿರೋಣ. ಒಂದು ಹೆಸರು ಹುಡುಕಿ ಈಗ. ನೀವು ಹುಡುಕಬೇಕು ಈಗ........ನೋಡಿ ನಗ್ತೀರ?........ ....ನನ್ನ ಮಾತೂ ಅಂದ್ರೆ ನಿಮಗೆ ತಾತ್ಸಾರ ಆಗಬೇಕೇ?

ಗಂ-ಅಲ್ಲವೆ! ಮುಂದೆ ಹುಟ್ಟೋ ಮಗು ಹೆಣ್ಣೋ, ಗಂಡೋ ಏನ್ನೋದು ಗೊತ್ತಿಲ್ಲದೆ ಇರುವಾಗ ಹೇಗೆ ನಿರ್ಧರಿಸೋದು?

ಹೆಂ-ಹೆಣ್ಣು ಹೆಸರೂ ಹೇಳ್ತಾಹೋಗಿ, ಗಂಡು ಹೆಸರೂ ಹೇಳ್ತಾಹೋಗಿ. ಒಂದೊಂದು ಹೆಸರೂ ಒಂದೊಂದರಲ್ಲಿ ನಿರ್ಧರಿಸಿ ಎಂಥ ಮಗು ಹುಟ್ಟುತ್ತದೊ ಅಂಥದಕ್ಕೆ ಅಂಥ ಹೆಸರು ಇಡೋಣ.

ಗಂ-ನಿನಗೆ ಎಂಥ ಹೆಸರಿರಬೇಕು? ನವೀನ ಹೆಸರುಗಳೋ? ಹಿಂದಿನ ಕಾಲದವೊ? ದೇವರ ಹೆಸರುಗಳೋ? ಮುದ್ದಿನ ಹೆಸರುಗಳೋ?

ಹೆಂ-ನೀವು ಹೇಳಿ ಒಂದೊಂದು ಬಗೆಯಲ್ಲಿ ಒಂದೊಂದು.

ಗಂ-ಮೊದಲು ಹೆಣ್ಣು ಹೆಸರು ಹೇಳಲಾ?

ಹೆಂ-ಆಗಲಿ.

ಗಂ-ಪಂಕಜ.

ಹೆಂ-ಏನ್ರೀ! ಪಂಕಜ ಅನ್ನೋದೇ? ಏನು ನಮ್ಮ ವಂಶ ಕೆಸರೆ? ನಮ್ಮ ಕುಲ ಕೊಳೆ ಆವಷ್ಟೆ? ಶ್ರೇಷ್ಠವಾದ ವಂಶದಲ್ಲಿ ಬಂದು ಪುರುಷಶ್ರೇಷ್ಠರನ್ನು ಕೈಹಿಡಿದವಳು ಪಂಕ ಹೇಗೆ ಆಗ್ತಾಳೆ! ಹೆಸರಿಟ್ಟ ತಂದೆತಾಯಿಗಳನ್ನು ಕೀಳು ಮಾಡಿಕೊಳ್ಳೋದೇ?

ಗಂ-ಕುಮುದಿನಿ.

ಹೆಂ-ಹಾಗಂದ್ರೆ?

ಗಂ-ಕುಮುದಪುಷ್ಪ-ಕನ್ನೈದಿಲೆ-ಕರಿನ್ನೈದಿಲೆ-ಕವಿಗಳಿಗೆ ಅತಿ ಪ್ರಿಯವಾದದ್ದು.

ಹೆಂ-ನನ್ನ ಮಗಳು ಕರಿಮೈಯವಳು ಆಗಿರಬೇಕು ಅಂತ ನಿಮ್ಮ ಇಷ್ಟನೊ? ನಮ್ಮ ಮಗಳು ಅಪರಂಜಿ ಒರೆಗೆ ಇರುತ್ತಾಳೆ.

ಗಂ-ಪದ್ಮಜ.

ಹೆಂ-ಪದ್ಮದಲ್ಲಿ ಏನು ಹುಟ್ಟುತ್ತೆ? ನೀವು ಇಂಥ ಹೆಸರಿಡೋದೆ? ಅನ್ವರ್ಥವಾಗಿರಬೇಕು ಹೆಸರು.

ಗಂ-ಬಲು ಕಷ್ಟ ಬಂತಲ್ಲಪ್ಪ! ವರದ ಅಂತ ಇಡೋಣವೇ?

ಹೆಂ-ತಗಣೆವರದ! ಏನ್ರೀ ನೀವು?

ಗಂ-ವರದ ನದಿ! ನಮ್ಮ ಮಲೆನಾಡಿನ ಪಾವನೆಯಾದ ನದಿ, ಸುಂದರವನ ತರುಗಳ ಮಧ್ಯೆ ಹರಿಯುವ ನಿರ್ಮಲ ನಿರ್ಝರ!

ಹೆಂ ಚೆನ್ನಾಗಿಲ್ಲ, ಅದುಬೇಡ.

ಗಂ ಸುಗ್ಗಲೆ, ಚಾಮುಣ್ಣೆ, ರೇಚಮ್ಮ, ಮಲ್ಲಮ್ಮ, ಚೆನ್ನವ್ವಾಜಿ, ನೀಲಾಂಬಿಕೆ, ಲಕ್ಷ್ಮೀಬಾಯಿ.

ಹೆಂ-ಇವು ಬೇಡ, ಇವು ಹಳೆಯ ಹೆಸರು.

ಗಂ-ಸೀತಾ.

ಹೆಂ-ಬೇಡ, ರಾವಣನ ನೆನಪಾಗುತ್ತೆ.

ಗಂ-ಸಾವಿತ್ರಿ, ಅಹಲ್ಯ, ದಮಯಂತಿ.

ಹೆಂ-ಸಾವಿತ್ರಿ! ಎಷ್ಟು ಕಷ್ಟ ಯಮನ ಜೊತೆಗೆ ಹೋರಾಡೋದು! ಅಹಲ್ಯ ......... ಅವಳಿಗೆ ಶಾಪ! ದಮಯಂತಿ! ಶಿವ! ಶಿವ! ಅವಳ ಬವಣೆ ನೆನೆಸಿಕೊಂಡ್ರೆ!

ಗಂ-ರುಕ್ಮಿಣಿ

ಹೆಂ-ಬೇಡ್ರಿ, ರುಕ್ಮಿಣಿ ಕುಕ್ಕರ್ ನೆನಪಾಗುತ್ತೆ.

ಗಂ-ಇನ್ಯಾವ ಹೆಸರಿಡೋದಪ್ಪ! ಚಿನ್ನಮ್ಮ ಅಂತ ಇಡೋಣವೇ?

ಹೆಂ—ನಮ್ಮ ಮನೆ ಮುಸುರೆ ತಿಕ್ಕೋವಳ ಹೆಸರು.

ಗಂ-ತಂಗಚ್ಚಿ!

ಹೆಂ-ಏನ್ರೀ ನೀವು ಇಂಥಾವ್ರು! ಹರಿಕಥೆ ಒಳಗಿನ ಉಪಕಥೇನೇ?

ಗಂ—ತಿಕ್ಕಲು ತಿಮ್ಮಿ ಅಂತ ಇಡು.

ಹೆಂ-ನೋಡಿ, ನನಗೆ ರೇಗ್ತಾದೆ!

ಗಂ-ರೇಗು, ನನಗೇನು?

ಹೆಂ—ಬೇರೆ ಹೆಸರು ಹೇಳಿ.

ಗಂ-ಪುಟ್ಟತಾಯಮ್ಮ.

ಹೆಂ-"ಪುಟ್ಟ" ಬೇರೆ, "ತಾಯಿ" ಬೇರೆ, "ಅಮ್ಮ" ಬೇರೆ.

ಗಂ-ಅಪ್ಪಣ್ಣಿ, ಅಮ್ಮಣ್ಣಿ, ಗೌರಣ್ಣಿ, ಅಪ್ಪಕ್ಕ, ಅಕ್ಕಪ್ಪ, ಅಪ್ಪಯ್ಯಕ್ಕ, ಅಕ್ಕಯ್ಯಪ್ಪ, ಅಪ್ಪಯ್ಯ, ಅಮ್ಮಯ್ಯಕ್ಕ, ಅಕ್ಕಯ್ಯಾಜಿ, ಅಪ್ಪಯಮ್ಮ, ಅಮ್ಮಣ್ಣಮ್ಮ, ತಂಗೆಪ್ಪ, ಅಕ್ಕಮ್ಮಯ್ಯ!

ಹೆಂ—ಛೇ! ಛೇ! ನನ್ನ ತಲೆ ಕೆಟ್ಟು ಚಿಟ್ಟುಹಿಡಿದುಹೋಯಿತು ಈ ಹಾಳು ಹೆಸರು ಕೇಳಿ.

ಗಂ-ನನ್ನ ತಲೆ ಕೆಟ್ಟುಹೋಯಿತು ಇವನ್ನು ನೆನಪುಮಾಡಿ ಹೇಳಿ.

ಹೆಂ-ನಾಕು ಮಹರಾಯರೆ! ಹೋಗಲಿ ಗಂಡು ಹೆಸರು ಹೇಳಿ.

ಗಂ-ಚಂದ್ರಕಾಂತ.

ಹೆಂ-ಚಂದ್ರನಿಗೆ ಕಾಂತನೇನ್ರೀ ?

ಗಂ-ಸೂರ್ಯಪ್ರಕಾಶ.

ಹೆಂ-ನನ್ನ ಮಗ ಬೆಳಗಿನಿಂದ ಸಂಜೆ ತನಕ ಒಂದೇಸಮ ಉರೀಬೇಕು ಅಂತೀರ?

ಗಂ-ಪ್ರದ್ಯೋತ ಕುಮಾರ.

ಹೆಂ-ನಮ್ಮ ಚಿಕ್ಕಮ್ಮನಿಗೆ ಈ ಹೆಸರು ಕೂಗೋಕಾಗೋಲ್ಲ.

ಗಂ-ಕಾಳೀಚರಣ.

ಹೆಂ-ಬೇಡ, ಭಯ ಆಗ್ತದೆ; ಡಿಟೆಕ್ಟಿವ್ ನಾವೆಲಿನಲ್ಲಿ ಬರೋ ಖೂನಿಗಾರರ ಹೆಸರು ಇರೋಹಾಗೆ ಇದೆ.

ಗಂ-ಸಿದ್ಧಾರ್ಥ, ಬುದ್ಧ.

ಹೆಂ-ಸಿದ್ದ, ಬುದ್ದ ಇವೆಲ್ಲ ಒಂದೇ ಜಾತಿಯ ಹೆಸರು.

ಗಂ-ಅಶೋಕ.

ಹೆಂ-ಸಿನಿಮಾದವರ ಹೆಸರು.

ಗಂ-ಶಶಿಶೇಖರ ಭಟ್ಟಾಚಾರ್ಯ.

ಹೆಂ-ಅಮ್ಮ! ಒಂದು ಸಾರಿ ಈ ಹೆಸರು ಕೂಗಿ ಒಂದು ಲೋಟ ಕಾಫಿ ಕುಡೀಬೇಕು.

ಗಂ-ಭೂತುಗ, ಒದ್ದೆಗ, ಬಿಟ್ಟಗ, ಅರಿಕೇಸರಿ.

ಹೆಂ-ಇಸ್ಸಿಸ್ಸಿಸ್ಸೀ! ನಾ ಕೇಳಲಾರೆ.

ಗಂ-ಕಾಮಿನೀಕಾಂತ ಅಂತ ಇಡಬಹುದೋ ?

ಹೆಂ-ಕಾಮಿನಿಗೆ ಕಾಂತನಾಗದೆ ಕೋತಿಗೆ ಕಾಂತನಾಗುತ್ತಾನೇನ್ರೀ ? ಅದನ್ನು ಹೇಳಿ ಹೆಸರಿಡಬೇಕೆ ?

ಗಂ-ಪಂಡಿತಾರಾಧ್ಯ.

ಹೆಂ-ಪಂಡಿತರಲ್ಲಿ ಆರಾಧ್ಯ ! ಮಗ, ಮುಸಲ, ಪಂಡಿತಪುತ್ರನಾಗಿಬಿಟ್ಟರೆ ಲೋಕ ಹೆಸರಿಟ್ಟವರನ್ನು ಆಡಿಕೊಳ್ಳೋದಿಲ್ಲವೆ ?

ಗಂ-ಆನಂದವರ್ಧನ.

ಹೆಂ-ಆ-ನಂ-ದ-ವ-ರ್ಧ-ನ. ಸಂತೋಷವನ್ನು ಹೆಚ್ಚಿಸುವವನು ! ಇವನೊಬ್ಬ ಅಳುಮೊರಿ ಮಗುವಾದ್ರೆ ಏನುಮಾಡೋದು ?

ಗಂ-ಕುರುವತ್ತಿ ಅಂತ ಇಡು.

ಹೆಂ-ಯಾರು, ಆ ಕುಂಟ ಕುರುವತ್ತಿ-ಕಳ್ಳ ? ಏನ್ರೀ, ಎಂಥಾವ್ರು ನೀವು ?

ಗಂ-ಅದನ್ನೆ ಇಡು.

ಹೆಂ-ಹಾ ! ಹಾ ! ಸಾವಧಾನ. ಸನ್ನಿಧಿ ಕೋಪಿಸಿಕೊಳ್ಳಕೂಡದು. ಮುಂದೆ ಅಪ್ಪಣೆ ಕೊಡಿಸೋಣವಾಗಲಿ.

ಗಂ-ನಿನ್ನ ತಲೆ ! ಇನ್ನೇನು ಹೆಸರಿಡೋದು ?

ಹೆಂ-ಕೋಪಿಸಿಕೋಬೇಡಿ ನಣೆಗಳೆ. ಸೊಗಸಾದ ಕಾಫಿ ಮಾಡ್ತೀನಿ, ಸೊಗಸಾದ ತಿಂಡಿ ನಿಮ್ಮ ದೊಡ್ಡತ್ತೆ ಕಳಿಸಿದ್ದಾರೆ.

ಗಂ ಮೊದಲು ಯಾಕೆ ತರಲಿಲ್ಲ ?

ಹೆಂ-ಇಲ್ಲ; ಹೆಸರು ಹೇಳಿ, ತರ್ತೀನೆ.

ಗಂ-ನಿನ್ನ ಹೆಸರು ದಿನವೂ ಹೇಳ್ತೀನಲ್ಲ.

ಹೆಂ-ಅದಲ್ಲ, ಇನ್ನೊಂದು ಹೆಸರು-ಸೊಗಸಾಗಿರೋದು ಹೇಳಿ.

ಗಂ-"ಕೇಳಲೆ ಬಾಲೆ, ಬಾಲೇಂದು ಫಾಲೆ".

ಹೆಂ-ಇಸ್ಸೀ.

ಗಂ-'ಮನೋನ್ಮಣಿ', 'ಪೆಣ್ಮಣಿ'

ಹೆಂ-ಏನ್ಮಾಡ್ತೀರ, ನನ್ನ ಮದುವೆ ಆದ್ರೂ ಈ ಹುಚ್ಚು ನಿಮಗಿನ್ನೂ ಹೋಗಲಿಲ್ಲ !

ಗಂ-ನನ್ನ ಮುದ್ದು ಮಣಿ, ಕೇಳು; ಹೆಸರಿನಲ್ಲಿ ಏನಿದೆ? ನಮ್ಮ ಕವಿ ಕುಲಗುರು ಆ ಷೇಕ್ಸ್‌ಪಿಯರ್ ಹೇಳ್ತಾನೆ-'ಹೆಸರಿನಲ್ಲಿ ಏನಿದೆ ?' ಇರೋದು ಬಂಡ್ವಾಳ ಗುಣದಲ್ಲಿ, ಇರೋದು ಬಂಡ್ವಾಳ ಯೋಗ್ಯತೆಯಲ್ಲಿ, ಇರೋದು ಬಂಡ್ವಾಳ ಪರರಿಗೆ ನಮ್ಮಿಂದ ಆಗೋ ಸಹಾಯದಲ್ಲಿ. ಈಗಿನ ಈ ಐಲು ಜನ ಹೆಸರಿಗೆ ಭ್ರಮಿಸಿ ಏನೇನೊ ಹೆಸರುಗಳನ್ನು ಅರ್ಥವಿಲ್ಲದೆ ಇಡೋದು ಕರೀ ಮುಖಕ್ಕೆ ಬಣ್ಣ ಬಳಿದುಕೊಂಡ ಹಾಗೆ! ನಮಗೆ ಅದು ಬೇಡ.

6-10-42

# ಸ್ವರ್ಣಮುಖಿ

ರಾಜಶೇಖರನು ಚಿಕ್ಕವನಿರುವಾಗ ಪಟ್ಟಣ ಸೇರಿದನು. ಜೀವನವು ಪಟ್ಟಣದಲ್ಲಿಯೇ ಬೆಳೆಯಿತು. ಮದುವೆಯಾದದ್ದೂ ಅಲ್ಲಿಯೇ. ಆದರೆ ಗಿರಿ ಶಿಖರಗಳ ಮಧ್ಯೆ, ಕಾನನ ಕಾಂತಾರಗಳ ನಡುವೆ, ಬಳಸಿ ಹರಿಯುವ ಚೆಲುವ ತೊರೆಯೊಂದರ ತೀರದಲ್ಲಿ ಅವನ ಊರು. ಅದು ಆಗಾಗ ನೆನಪಿಗೆ ಬರುವುದು. ಅದನ್ನು ನೆನೆಸಿಕೊಳ್ಳುವನು. ಯಾವುದೋ ವಿಸ್ಮೃತಿಯು ಬಂದು ಅಳಿಸಿ ಹೋಗುವುದು

ಅವನ ಮನೆತನ ಆ ನಾಡಿನಲ್ಲಿ, ಹಿಂದೆ, ಹೆಸರಾದದ್ದು. ಆ ಪೀಳಿಗೆಯಲ್ಲಿ ಈಗ ಉಳಿದಿರುವವನಿವನೊಬ್ಬನೆ. ತಾನು ಹುಟ್ಟಿದ ಊರು, ತನ್ನ ಮನೆ, ತಾನಾಡಿದ ಚೆಲುವಿನ ಪ್ರದೇಶ, ಎಲ್ಲವೂ ಪದೇಪದೆ ನೆನಪಿಗೆ ಬರುವುವು. ತಾನು ಈಗ ಅಲ್ಲಿಗೆ ಹೋಗಿರಲಾರ. ಜೀವನವು ಪಟ್ಟಣಕ್ಕೆ ಹೊಂದಿಕೊಂಡಿದೆ. ಇವನ ಹೆಂಡತಿಯೂ ಇಲ್ಲಿಯೆ ಬೆಳೆದವಳು. ಗಂಡಹೆಂಡಿರು ಹಲವು ಬಾರಿ ಆ ಊರನ್ನು ಕುರಿತು ಮಾತನಾಡಿಕೊಳ್ಳುವರು. ಇವಳು ಅದನ್ನು ನೋಡಿರಲಿಲ್ಲ. ಆದರೆ ಅನೇಕರು ಬಂದು ಇವಳು ಯಾವ ವಂಶಕ್ಕೆ ಈಗ ಸೇರಿದವಳಾದಳೋ ಅದರ ಹಿರಿಮೆಯನ್ನೂ, ಕಳೆದ ವೈಭವವನ್ನೂ ವರ್ಣಿಸುವರು. ಭವ್ಯವಾದ ಮನೆ, ಭವ್ಯವಾದ ಭೂಸಂಪತ್ತಿ ಎಲ್ಲವೂ ಇತ್ತು; ಇದೆ. ಆದರೂ ಇವನ ಮನ ಅಲ್ಲಿಯೇ ಇರಲು ಒಗ್ಗದು. ಇವನು ತನ್ನ ಊರನ್ನೂ ತನ್ನ ಮನೆಯನ್ನೂ ತನ್ನ ಹಿರಿಯರನ್ನೂ ನೆನೆಸಿಕೊಂಡು, ಕರ್ಣಾಕರ್ಣಿಕೆಯಾಗಿ ತಿಳಿದುಬಂದ ಅವರ ಬಾಳಿನ ಬದುಕನ್ನು ನೆನೆಸಿಕೊಂಡು ಆಗಾಗ ನಿಟ್ಟುಸಿರು ಕಳೆಯುವನು. ಹೆಂಡತಿಗೆ ಹೇಳುತ್ತಿರಲಿಲ್ಲ. ಎಲ್ಲಿಯೋ ಸ್ವಲ್ಪ ಅವಳಿಗೆ ತಿಳಿದಿತ್ತು. ತಮ್ಮ ಊರ ಜಾತ್ರೆಯಕಾಲ ಬಂದಾಗ "ಹಾ! ಈಗಲ್ಲಿ ಜಾತ್ರೆ" ಎಂದಂದುಕೊಳ್ಳುವನು. ಇವನ ಎಳೆಯತನದಲ್ಲಿ ಮೂಡಿದ ಚಿತ್ರ ಮಿಂಚಿ ಹೋಗುವುದು.

ಎಂದಾದರೊಂದು ದಿನ ಊರಿಗೆ ಹೋಗುವನು. ಇವನ ಮನೆಯಲ್ಲಿ ಯಾರೂ ಇಲ್ಲ. ಆ ಭವ್ಯವಾದ ಮನೆ ಮುದಿತನವನ್ನು ಕಾಣುತ್ತಿತ್ತು. ಇವನು ತನ್ನ ರೈತರು ಕೊಟ್ಟಷ್ಟು ತೆಗೆದುಕೊಂಡು ಬರುವನು. ಬೆಳೆಯನ್ನು ಅಳೆಸಲು ಇವನು ಹೋದಾಗ ರೈತರು ಇವನಿಗೆ ಮೋಸಮಾಡುವರು. ಇದು ಅವನಿಗೆ ಗೊತ್ತಾಗುವುದು ಆದರೆ ಅವರನ್ನು ಕೇಳನು. ರೈತರು, ತಮ್ಮ ಧಣಿ ಮಂಕ ನೆಂದು ಅವನಿಗೆ ಇನ್ನಷ್ಟು ಟೋಪಿ ಹಾಕಬೇಕೆನ್ನುವರು. ಇವನು ಅವರನ್ನು ಕೇಳ. ಅವರು ಇವನಿಗೆ ಕೊಡರು. ಹೀಗೆಯೇ ಬದುಕು.

ಒಂದು ದಿನ ಹೆಂಡತಿ ಬಹಳ ಪೀಡಿಸಿದಳು, ತನ್ನ ಊರನ್ನು ತನ್ನ ಅತ್ತೆ ಮಾವಂದಿರ ಮನೆಯನ್ನು ನೋಡಬೇಕೆಂದು. ಏನೋ ಬೇಸರದಿಂದ, ಏನೋ ಬಿಮಾನದಿಂದ ಒಪ್ಪಿ ಕರೆದುಕೊಂಡು ಹೊರಟನು.

ಒಳನಾಡಿನದಾರಿ, ಗಾಡಿಯಲ್ಲಿ ಹೊರಟಿದ್ದಾರೆ. ಹೆಂಡತಿ ಚಪಲತನ ದಿಂದ, "ಇಳಿದು ಹೋಗೋಣ! ಗಾಡಿ ಬರುತ್ತಿರಲಿ" ಎನ್ನುತ್ತಿರಲು ಇಬ್ಬರೂ ಇಳಿದು ನಡೆದು ಹೊರಟರು. ರಸ್ತೆ, ಸಾಲುಮರ, ಅಲ್ಲಲ್ಲಿ ಬೆಳೆಮಾಡಿದ್ದ ತೋಟಗಳು, ದೂರದೂರದಲ್ಲಿ ಕಾಣುವ ಗಿರಿದುರ್ಗಗಳು, ಕೆಲವೆಡೆ ಬಯಲು, ಬಯಲಲ್ಲಿ ಕೆಲವರು ಕುರಿ ಮೇಯಿಸುವವರು. ಸಂಜೆಯಾಗುವುದರಲ್ಲಿರುವ ಇಳಿಹೊತ್ತು. ಸೂರ್ಯನ ತಾಪ ಅಷ್ಟು ಹೆಚ್ಚಿರಲಿಲ್ಲ. ಒಂದೊಂದು ವೇಳೆ ಸ್ವಲ್ಪ ತಂಪಾದ ಗಾಳಿ ಬೀಸುವುದು. ಗೌರೀದೇವಿ ಅತಿ ಉತ್ಸಾಹಭರಿತಳಾಗಿ ದ್ದಾಳೆ. ಆ ಮಾತು ಈ ಮಾತು ಆಡಿಕೊಂಡು ಮುಂದೆ ಸಾಗಿದ್ದಾರೆ. ಹಿಂದಿದ್ದ ಗಾಡಿಯು ಬರುವ ಶಬ್ದ ಆಗಾಗ 'ಕಡ ಕಡ' 'ಗಡ ಗಡ' ಎಂದು ಮೆಲ್ಲನೆ ಹೊರಳಿಕೊಂಡು ಗಾಳಿಯಲ್ಲಿ ತೇಲಿಕೊಂಡು ಕೇಳಿಸುವುದು. ಅಂತಹ ಬಯಲ ಪ್ರದೇಶದಲ್ಲಿ ಪ್ರಕೃತಿಗೆ ಅದೇನೋ ಒಂದು ಬಗೆಯ ಸೌಮ್ಯಶಾಂತಿ ಯಿದೆ. ಅಲ್ಲಲ್ಲಿ ಒಂದೊಂದು ಹಕ್ಕಿ ಚಿಲಿಪಿಲಿ ಗುಟ್ಟಿ ವೈಯನ್ನು ಬಗೆಬಗೆ ಯಾಗಿ ಕೊಂಕಿಸಿ ಹಾರಿಹೋಗುವುದು. ಚಿಗುರೆಲೆ ಸೂರ್ಯ ರಶ್ಮಿಯಲ್ಲಿ ರೇಷ್ಮೆ ಯಂತೆ ಮಿನುಗುವುದು. ಸಂಜೆ, ಬಯಲು, ಪ್ರಕೃತಿಯ ಆರಾಮು, ಸುಂದರ ವಾಗಿಲ್ಲದೆ ಮತ್ತೇನು !

ದೂರದಿಂದ ಕುರಿಕಾಯುವವನ ಕೊಳಲಿನಿಂದ ಒಮ್ಮೆಗೆ ಒಂದು ಸುನಾದ ಹರಿದು ಬಂದಿತು. ಇಬ್ಬರೂ ಪುಲಕಿತರಾದರು. ಹೆಂಡತಿ ಗೌರಿಯು ಬಹು ಆಹ್ಲಾದಮಯಿಯಾಗಿದ್ದಾಳೆ.

ಗೌರಿ- ಬಿಸಿಲು ಹೆಚ್ಚಾಗಿದ್ರು ನಮಗಷ್ಟು ಶ್ರಮ ಕಾಣಿಸೋಲ್ಲ ಅಲ್ಲವೇ ?

ರಾಜ-ನಿನ್ನ ಮನಸ್ಸಿಗೆ ಬಹಳ ಸಂತೋಷವೊ ಇವತ್ತು ?

ಗೌರಿ-ನಮ್ಮ ಮಾವನ ಮನೆಗೆ ಹೋಗುತ್ತ ಇದ್ದೇವೆ. ನೀವು ಹುಟ್ಟಿದ ಊರು, ನೀವು ಬೆಳೆದ ಊರು, ಏನೋ ಅನ್ನಿಸುತ್ತೆ ನನ್ನ ಮನಸ್ಸಿಗೆ. ನೀವು ಚಿಕ್ಕವರಾಗಿದ್ದಾಗ ಹೇಗಿದ್ರಿ ? ಅದೆಲ್ಲ ನನ್ನ ಮನಸ್ಸಿಗೆ ಊಹಿಸಿಕೊಳ್ಳೋ ಹಾಗೆ ಆಗುತ್ತೆ. ನಾವಿಬ್ರೂ ಜೊತೆಗೆ ಬೆಳೆದಿದ್ರೆ ಎಷ್ಟು ಚೆನ್ನಾಗಿತ್ತು !

ರಾಜ-ಅಯ್ಯೊ ಪೆಚ್ಚಿ ! ಅಲ್ಲಿ ನೋಡು, ಅದೇನು ಹಕ್ಕಿ ಗೊತ್ತೆ ?

ಗೌರಿ-ನಾನು ನೋಡಿಲ್ಲ. ಕಾಗೆ ಹಾಗೆ ಇದೆ. ಆದರೆ ರೆಕ್ಕೆಗೆ ಮಾತ್ರ ಬಣ್ಣ ಇದೆ.

ರಾಜ-ಅದಕ್ಕೆ ನಾವು ಸಂಬಾರ ಕಾಗೆ ಎನ್ನುತ್ತೇವೆ.

ಗೌರಿ-ಈ ಮರ ಚೆನ್ನಾಗಿ ಬೆಳೆದಿದೆ. ಇಲ್ಲೇ ಕೂತ್ಕೊಳ್ಳೋಣ. ಗಾಡಿ ಬರ್ಲಿ. ಕೊಂಚ ಬಿಸಿಲು ಇದೆ. ಇಲ್ಲೆ ತಿಂಡಿ ತಿನ್ನೋಣ, ಆದ್ರೆ ನೀರು ?

ರಾಜ-ಬೇಡ ಆ ಗಿಡದ ಮಧ್ಯೆ ಇರೋ ಹಳ್ಳ ದಾಟಿ ಮುಂದೆ ಹೋದ್ರೆ ದಿಣ್ಣೆ. ದಿಣ್ಣೆ ಕೆಳಗಿಳಿದ್ರೆ ನಮ್ಮೂರು.

ಗೌರಿ-ಹಳ್ಳಿದಾರಿ, ಇಲ್ಲೆ ಇದೆ ಅಂತ ಕಂಡ್ರೂ ಎಷ್ಟು ದೂರ ನಡೀ ಬೇಕು ! ಅದು ಹಳ್ಳವೊ ? ಅಲ್ಲಿ ಗಿಡ ಯಾಕೆ ಇರಬೇಕು ?

ರಾಜ-ನೀರಿನ ತಂಪಿಗೆ ಗಿಡ ಬೆಳೆದಿರ್ತವೆ—ಹಳ್ಳದ ತಡಿಯಲ್ಲಿ.

ಗೌರಿ-ಆ ಹಳ್ಳದ ಹೆಸರೇನು ?

ರಾಜ-ಅದು ಹಳ್ಳ ಅಲ್ಲ. ಕರೆಯೋ ವಾಡಿಕೆ ಹಾಗೆ. ಅದೊಂದು ನದಿ–ಸ್ವರ್ಣ ಮುಖಿ ಅಂತ ಅದರ ಹೆಸರು.

ಗೌರಿ–ಅದೇಕೆ ಆ ಹೆಸರು ?

ರಾಜ-ಅದರ ಮರಳಿನಲ್ಲಿ ಚಿನ್ನದ ರೇಕು ಬೆರೆವಿವೆಯಂತೆ. ಹಿಂದೆ ಆ ಮರಳನ್ನು ಜಾಲಿಸಿ ಚಿನ್ನ ತೆಗೆಯುತ್ತಿದ್ದರಂತೆ. ಆದ್ದರಿಂದ ಅದಕ್ಕೆ ಸ್ವರ್ಣ ಮುಖಿ ಎಂಬ ಹೆಸರು

ಗೌರಿ–ಹಾಗಾದ್ರೆ ಬನ್ನಿ. ಆ ನದೀದಡದಲ್ಲೆ ಕೂತು ತಿಂಡಿತಿನ್ನೋಣ

ರಾಜ-ಬೇಡ ಊರು ಹತ್ತಿರ. ಊರಿಗೇ ಹೋಗೋಣ.

ಗೌರಿ-ನಿಮ್ಮದು ಯಾವಾಗಲೂ ಹೀಗೇನೆ !

ಇಬ್ಬರೂ ನಡೆದುಕೊಂಡು ಮುಂದೆ ಹೊರಟರು. ನದಿ ಸಮೀಪಿಸಿತು. ಗೌರಿ ಹೇಳಿದಳು—"ನೋಡಿದ್ರೊ ಇಲ್ಲೆಷ್ಟು ತಂಪಾಗಿದೆ. ಈ ಹೊಂಗೇ ಮರಗಳು; ನಾವಿಲ್ಲೆ ಕೂತ್ಕೊಳ್ಳೋಣ; ಗಾಡಿ ಬರ್ಲಿ; ಅವನೂ ಎತ್ತಿಗೆ ನೀರು ಕುಡಿಸುತ್ತಾನೆ."

ನೀರಿನಲ್ಲಿ ಕೈಕಾಲು ತೊಳೆದುಕೊಳ್ಳಲು ಹೋಗುವವಳನ್ನು ರಾಜಶೇಖರನು ನಿಷೇಧಿಸಿದನು. "ಮುಖ ತೊಳೆದುಕೊ. ಆದರೆ ನೀರು ಕುಡಿ ಬೇಡ" ಎಂದು ತಿಳಿಸಿದನು.

ಆಶ್ಚರ್ಯಗೊಂಡ ಹೆಂಡತಿ "ಇದೇನು ಹೀಗೆ ಹೇಳುತ್ತೀರಿ ? ನೀರು ಎಷ್ಟು ತಂಪಾಗಿದೆ, ತಿಳಿಯಾಗಿ ಇದೆ, ಒಳ್ಳೆಯ ನೀರು. ಕುಡಿಯಬಾರದೆ? ಅಲ್ನೋಡ್ರಿ ಆ ಕಡೆ, ಅಲ್ಲಿ, ಯಾರೋ ಕುಡೀತಾ ಇದ್ದಾರೆ" ಎಂದಳು.

ರಾಜ–ಅವರು ಕುಡೀಲಿ, ನಾವು ಕುಡಿಯಬಾರದು.

ಗೌರಿ-ಏಕೆ ?

ರಾಜ–ಅದೆಲ್ಲ ಕೇಳಬೇಡ, ಬಾ, ಹೋಗೋಣ.

ಗೌರಿ–ನನಗೆ ಬಹಳ ಬಾಯಾರಿಕೆ. ಇದೊಂದು ಬೊಗಸೆ ಕುಡಿದು ಬಿಡ್ತೇನೆ. ರೋಗ ಏನೂ ಬರಲಾರದು.

ರಾಜ–ಬೊಗಸೆ ನೀರು ಬಿಡು, ಬಿಟ್ಟುಬಿಡು, ಬೇಡ, ಕುಡಿಯಬೇಡ, ಖಂಡಿತ ಕುಡಿಬೇಡ, ನನ್ನಾಣೆ !

ಗೌರಿ-ನಿಮ್ಮದು ಹಾಸ್ಯ.

ರಾಜ-ಹಾಸ್ಯ ಅಲ್ಲ, ಖಂಡಿತ ಬೇಡ, ದೇವರಾಣೆಗೂ ಬೇಡ !

ಗೌರಿ-ಈ ನೀರು ಮುಟ್ಟಬಾರದೆ ?

ರಾಜ-ಮುಟ್ಟಬಹುದು. ನಾವು, ನಮ್ಮ ಮನೆತನದವರು ಈ ನೀರು ಕುಡಿಯುವುದಿಲ್ಲ.

ಗೌರಿ-ಯಾಕೆ ? ನನಗೆ ಹೇಳಿ, ಏನು ಕಾರಣ?

ರಾಜ-ಇಲ್ಲ, ಈಗ ಬೇಡ; ಇನ್ನೊಂದು ದಿನ ಹೇಳ್ತೇನೆ.

ಗೌರಿ-ನೋಡಿದ್ರೋ, ನೀವು ಆಣೆ ಇಟ್ರಿ ! ನೀವು ಹೇಳ್ದಿಹೋದೆ ನನ್ನಾಣೆ; ನನ್ನ ಕೊರಳಾಣೆ.

ರಾಜ-ಬಾ, ಮುಂದೆ ಹೋಗೋಣ.

ಅವಳನ್ನು ಮುಂದಕ್ಕೆ ಎಳೆದುಕೊಂಡು ಹೋಗುತ್ತ ಹೇಳತೊಡಗಿದನು.

ಈಗಲೆ ನಿನಗಿದನ್ನು ಹೇಳಕೂಡದೆಂದಿದ್ದೆ. ಆದರೆ ಎಂದಾದರೊಂದು ದಿನ ನಿನಗೆ ಹೇಳಲೇ ಬೇಕು. ನಮ್ಮ ಮನೆಗೆ ತಂದುಕೊಂಡ ಸೊಸೆಯರಿಗೆ ಇದನ್ನು ಹಿರಿಯರು ಹೇಳುತ್ತಾರೆ. ಆದರೆ ನಾನೀಗ ನಿನಗೆ ಹೇಳಬೇಕಾಗಿದೆ. ಇದು ನನಗಷ್ಟು ಸಮಾಧಾನವಿಲ್ಲ. ಇದು ಅನೇಕ ತಲೆ ಮಾರಿನ ಹಿಂದೆ ನಡೆದ ಕಥೆ. ನಮ್ಮ ವಂಶದವರು ಶೂರರಾಗಿದ್ದರು. ಆಗ ಅದು ಅನಿಶ್ಚಿತ ವಾಗಿದ್ದ ಕಾಲ. ದೇಶದ ದೊರೆತನ ಸ್ಥಿರವಾಗಿರಲಿಲ್ಲ. ಈ ಪ್ರಾಂತಕ್ಕೊಬ್ಬ ಪಾಳೆಯಗಾರ-ನರಸಪ್ಪನಾಯಕ. ನಮ್ಮ ವಂಶದಲ್ಲಿ ಓಬ್ಬ-ವಿರುಪಣ್ಣ ಆತನ ರಾಜ್ಯದಲ್ಲಿ ದೊಡ್ಡ ಪದವಿಯಲ್ಲಿದ್ದ. ಈ ನರಸಪ್ಪನಾಯಕನ ರಾಜ್ಯವನ್ನು ಆಗ ಶತ್ರುಗಳು ಬಂದು ಮುತ್ತಿದರು. ಅವರು ಮರಾಠೆಯವರಿರಬೇಕು.

ನರಸಪ್ಪನಾಯಕನ ದೊರೆತನಕ್ಕೆ ಮುಳುವಾಗಿ ಶತ್ರುಗಳು ಬಂದ ಮುತ್ತಿದರು. ಅವನ ರಾಜ್ಯವನ್ನು ಉಳಿಸಲು ಅವನ ಸೇವಕರೂ, ಅಧಿಕಾರಿಗಳೂ, ಸೈನ್ಯವೂ, ಸ್ವಯಂನಾಯಕನೂ ಯುದ್ಧಕ್ಕೆ ನಿಂತರು.

ಈ ನದಿ, ಸ್ವರ್ಣಮುಖಿಯು ಮೇಲಿನಿಂದ ಹರಿದು ಬರುವುದು. ಆ ದಿಬ್ಬದ ಬಲಭಾಗಕ್ಕೆ ಹೊರಳಿಕೊಂಡರೆ ಅಲ್ಲಿ ನವಿಲ್ಕಾರು. ನಮ್ಮ ಊರ ಹತ್ತಿರವೂ ಈ ಹೊಳೆ ಹರಿದು ಬರುತ್ತಿದೆ. ಹಿಂದೆ, ಊರಿಗೆ ಕೋಟೆಯಿತ್ತು. ಯುದ್ಧ ನಡೆಯುವ ಕಾಲದಲ್ಲಿ ಹೊಳೆತುಂಬಿ ಹರಿಯುತ್ತಿತ್ತು. ಕೋಟೆಯ ಆಚೆ ಆ ಹಿಂದಿನ ರಾತ್ರಿ ನರಸಣ್ಣ, ಪಿರುಪಣ್ಣ ಸೈನ್ಯ ತೆಗೆದುಕೊಂಡು ಶತ್ರುವನ್ನು ಅಟ್ಟಲು ಹೊರಟಿದ್ದರು. ೬-೭ ಮೈಲಿಗಳ ಮೇಲುಭಾಗದಲ್ಲಿ ನದಿಯನ್ನು ದಾಟಿ ಈ ಕೋಟೆಗೆ ಲಗ್ಗೆ ಹತ್ತಬೇಕೆಂದು ಶತ್ರು ಪ್ರಯತ್ನ. ನದಿಯನ್ನು ದಾಟುವುದರೊಳಗಾಗಿ ಅವರನ್ನು ಹಡೆದೋಡಿಸಬೇಕೆಂದು ಈ ನಾಯಕನ ಸೈನ್ಯ ನುಗ್ಗಿತ್ತು. ಯುದ್ಧದ ಸಂಭವ ಆಚೆ ತೀರ, ಈಚೆ ತೀರ ಮತ್ತು ನದಿಯ ಜಲಭಾಗ ಇಲ್ಲೆಲ್ಲ ನಡೆಯಬೇಕಾಗಿತ್ತು. ಶತ್ರುವು ಅನೇಕ ತೆಪ್ಪಗಳನ್ನು ತಂದು ಅವುಗಳಿಂದಲೂ, ತನ್ನ ಕುದುರೆಗಳಿಂದಲೂ ನದಿಯನ್ನು ದಾಟಿ ಈಜಬೇಕೆಂದು ಅವನ ಪ್ರಯತ್ನ. ಹಾಗೆ ಬರುವವನನ್ನು ಆಚೆ ದಡದಲ್ಲಿಯೇ ತಡೆಯಲು ಇವರ ಯತ್ನ. ಹೀಗಾಗಿ, ಇವರ ಯುದ್ಧರಂಗ ಆಚೆ ದಡವೂ ಈಚೆ ದಡವೂ ಸೇರಿ, ಮಧ್ಯೆ ನದಿಯನ್ನೂ ಸೇರಿಕೊಂಡ ಯುದ್ಧರಂಗವಾಗಿತ್ತು.

ಗಂಡಾಳುಗಳೆಲ್ಲ ಯುದ್ಧಕ್ಕೆ ಹೋಗಿದ್ದರು. ಅನಿರ್ವಾಹ ಪ್ರಸಂಗ ಬಂದರೆ ಇರಲೆಂದು ಕೊಂಚಜನ ಕೋಟೆಯ ರಕ್ಷಣೆಗೆ. ಬೆಳಗಾಯಿತು. ಹೊತ್ತೇರಿತು. ಸುದ್ದಿ ನಿಮಿಷ ನಿಮಿಷಕ್ಕೂ ಅನಿಶ್ಚಿತವಾಗಿತ್ತು. ಕದನ ಬಲು ಭರದಿಂದ ಸಾಗಿತ್ತಂತೆ. ಏನಾಗಿಹೋಯಿತೋ ಅಂದಿನ ಕೋಲಾಹಲದಲ್ಲಿ! ಕೋಟೆಯವರೆಲ್ಲ ಜೀವ ಹಿಡಿದುಕೊಂಡಿದ್ದರು. ನಿಶ್ಚಿತವಾದ ಸುದ್ದಿ ಬರಲೇ ಇಲ್ಲ. ಯುದ್ಧ ನಡೆಯುತ್ತಲೇ ಇತ್ತು. ಬಹಳ ಅವಸರದ ಹೇಳಿಕೆಯೊಂದು ಬಂದುದರಿಂದ ಕೋಟೆಯೊಳಕ್ಕಿದ್ದ ಅಲ್ಪ ಸ್ವಲ್ಪ ಸೈನ್ಯವೂ, ಕಾವಲಿಗೆ ಕೊಂಚ ಜನ ಬಿಟ್ಟು ತಮ್ಮವರ ಒತ್ತಾಸೆಗಾಗಿ ಧಾವಿಸಿಹೋದರು. ೬-೭ ಮೈಲಿಗಳ ಆಚೆ, ಈ ಕೋಟೆಯ ಹೆಂಗಸರು ಮಕ್ಕಳಿಗೆ ಪ್ರಿಯರಾದವರು ಜೀವ ಸಾವುಗಳ ಹೋರಾಟದಲ್ಲಿದ್ದರು. ಅನೇಕ ಜನ ತಾಯಿಯರು, ಹೆಂಡತಿಯರು, ಅಕ್ಕತಂಗಿಯರು, ಆ ಅನಿಶ್ಚಿತವಾದ ಫಲಿತಾಂಶವನ್ನು ಎದುರುನೋಡುತ್ತ, ಆ ದುರ್ನಿಮಿತ್ತವನ್ನು ಹೇಗೆ ಕಳೆದೇವೆಂದು ಭಗವಂತ

ನನ್ನು ಬೇಡುತ್ತ, ಹಾವಿನ ಗಂಟಲಲ್ಲಿ ಸಿಕ್ಕ ಕಪ್ಪೆಯಂತೆ ಆ ಹೊತ್ತಿನಲ್ಲಿ ಜೀವ ಧಾರಣ ಮಾಡಿದ್ದರು.

ವಿರುಪಣ್ಣನ ಹೆಂಡತಿ ರೇಚಮ್ಮ, ಏನೋ ಒಂದು ಬಗೆಯ ಧೈರ್ಯದಿಂದ ಇದ್ದವಳು ಹೊತ್ತು ಏರಿದಂತೆಲ್ಲ ಸಂಕಟಪಡತೊಡಗಿದಳು. ಸ್ತ್ರೀಯರೆಲ್ಲ ಊರ ದೇವಾಲಯಕ್ಕೆ ಹೋಗಿ ಮಂಗಳಾರತಿ ಮಾಡಿಸಿಕೊಂಡು ಬಂದರು. ವಿವಿಧ ಪಾಪ ಹರಕೆ ಹೊತ್ತರು. ಆ ದುರ್ದಿನವೊಂದು ಕಳೆದರೆ ಸಾಕು, ದೈವ ಆ ಒಂದು ದಿನ ಪ್ರಸನ್ನವಾದರೆ ಸಾಕು. ಎಂದು ಇವರೆಲ್ಲರ ಪ್ರಾರ್ಥನೆ. ಸಮಾಚಾರವೇ ಬಾರದು. ನಾಯಕನ ಹೆಂಡತಿ —'ಸಮಾಚಾರ ತಿಳಿದುಕೊಂಡು ಬಾ' ಎಂದು ಕಳಿಸಿದ ಊಳಿಗದವರೆಲ್ಲ ಯುದ್ಧರಂಗದಲ್ಲಿ ನಿಂತರು. ಅಸಹಾಯ್ಯರಾದ ಸ್ತ್ರೀಯರೇನು ಮಾಡುವುದು? ನಿಮಿಷಗಳನ್ನು ಕಳೆಯುವುದು ಹೇಗೆ? ದುರ್ಭರವಾದ ಅನಿಶ್ಚಿತ ಪರಿಣಾಮವನ್ನು ಸಹಿಸುವುದು ಹೇಗೆ? ಹೊತ್ತು ನೆತ್ತಿಯನ್ನು ದಾಟಿತು. ಪಶ್ಚಿಮಕ್ಕೆ ಇಳಿಯಿತು. ಆ ದಿನದ ಬಿಸಿಲು ಬಲು ಉಗ್ರವಂತೆ. ಹೆಂಗಸರೆಲ್ಲರೂ ಉರಿ ಉರಿ ಎಂದು ತಳಮಳಿಸುತ್ತಿದ್ದರು. ಸ್ತ್ರೀಯರಾರೂ ಊಟ ಮಾಡಿರಲಿಲ್ಲ. ವಿಜಯಿಗಳಾದ ಪತಿಗಳನ್ನೂ, ಅಣ್ಣತಮ್ಮಂದಿರನ್ನೂ ಮಕ್ಕಳನ್ನೂ ಎದುಗೊಂಡು ಊಟಮಾಡುವುದೆಂದು ಅವರ ನಿಶ್ಚಯ. ದೇವಾಲಯದಲ್ಲಿ ಸತತ ಪೂಜೆ. ಮನೆಗಳಲ್ಲಿ ಎಲ್ಲರೂ ಪೂಜೆಯಲ್ಲಿದ್ದರು.

ರೇಚಮ್ಮ ಸಂಕಟ ತಡೆಯಲಾರದೆ ನದಿಯ ತಣ್ಣನೆಯ ನೀರಿನಲ್ಲಿ ಸ್ನಾನಮಾಡಿ ದೇಹದ ಉರಿಯನ್ನೂ ತನ್ಮೂಲಕವಾಗ ಮನಸ್ಸಿನ ಉರಿಯನ್ನೂ ಶಮನ ಮಾಡಿಕೊಳ್ಳಬೇಕೆಂದು ಬಗೆದು ನದಿಯ ಕಡೆಗಿದ್ದ ಕೋಟೆಬಾಗಿಲನ್ನು ತೆರೆದು ನದಿಗೆ ಇಳಿದಳು. ಇವಳಿಗೆ ಮಹಾ ಕಳವಳ. ಶತ್ರು ಸಮೀಪವಾಗಿರುವಾಗ ಕೋಟೆ ಬಾಗಿಲನ್ನು ತೆರೆಯುವುದೇ ಎಂದು. ಆದರೊಂದು ಧೈರ್ಯ: ತುಂಬಿ ಹರಿಯುವ ಹೊಳೆ. ಶತ್ರು, ಕೋಟೆ ಸಮೀಪದಲ್ಲಿ ನದಿ ದಾಟಲಾಗುತ್ತಿರಲಿಲ್ಲ. ಅಲ್ಲಿ ಆಳ ಬಹಳ. ಧೀರನಾದ ತನ್ನ ಪತಿ, ಶತ್ರುವನ್ನು ಅಲ್ಲಿ ತಡೆದು ಹಿಡಿದಿದ್ದಾನೆ. ಶತ್ರುವು ಇಲ್ಲಿಗೆ ಹೇಗೆ ಬಂದಾನು! ಇವಳ ಜೊತೆಗೆ ಕೆಲವರು ಹೆಂಗಸರು ಬಂದರು. ನದಿಯಲ್ಲಿ ಸ್ನಾನಮಾಡಿ ಉರಿಯನ್ನು ಶಮನಮಾಡಿಕೊಳ್ಳಲು ಮಹಾ ಕಳವಳದಿಂದ ಮಹಾ ದುಗುಡದಿಂದ ನೀರಿನಲ್ಲಿ ಇಳಿದಿ

ಸ್ವಾರೆ. ನೀರು ಕೆಸರಿನಿಂದ ತುಂಬಿ ನೊರೆಯಿಂದ ಹುಲ್ಲುಕಡ್ಡಿಗಳಿಂದ ಬಗ್ಗಡವಾಗಿದೆ. ಸ್ವರ್ಣಮುಖಿಯು ಸ್ವರ್ಣತೇಜವಿಲ್ಲ. ಸುಹಾಸಿನಿಯಾಗಿ, ಸುಶಾಲಿನಿಯಾಗಿ ಗಿಡಮರಗಳ ಮಧ್ಯೆ ಹರಿಯುವ ಈ ಸೌಂದರ್ಯವಿಲ್ಲ. ಗಿಡಮರಗಳ ಮಧ್ಯೆ ತೂರಿಬಿದ್ದ ಕಿರಣ ಈ ನೀರನ್ನು ಈಗ ಚಿತ್ರಿಸುತ್ತಿಲ್ಲ. ಸೌಂದರ್ಯವೂ ವಿರೂಪವಾಗಿದೆ.

ರೇಚಮ್ಮ ನೀರಿನಲ್ಲಿಳಿದಳು. ಕಣ್ಣುಮುಚ್ಚಿದ್ದಾಳೆ, ಭಗವತಿಯನ್ನು ಬೇಡಿದ್ದಾಳೆ—ತನ್ನ ಸೌಭಾಗ್ಯವನ್ನು ಉಳಿಸು ಎಂದು. ಸ್ತ್ರೀಯರೆಲ್ಲ ನೀರಲ್ಲಿ ಇಳಿದರು. ಮೂಗು ಮುಚ್ಚಿಕೊಂಡು ಮುಳುಗುಹಾಕಿದರು. ರೇಚಮ್ಮ ನೀರಿನಿಂದ ಎದ್ದು ಬೊಗಸೆಯಲ್ಲಿ ನೀರನ್ನು ತೆಗೆದುಕೊಂಡಿದ್ದಾಳೆ. ಮುಖ ಪ್ರಕ್ಷಾಲನ ಮಾಡಲು. ಹಾ! ಏನಾಗಿ ಹೋಯಿತು! ಬೊಗಸೆಯಲ್ಲಿ ನೀರು ಬಂದಿತು. ಕೈ ಭಾರದಿಂದ ಜಾಗುಳುತ್ತಿದೆ. ಏನದು? ಎಂದು ನೋಡಿದ್ದಾಳೆ. ಕೂದಲು ಕೈಗೆ ಸಿಕ್ಕಿಕೊಂಡಿದೆ. ಏನು ಕೂದಲಿದು! ಎಂದು ಎತ್ತಿದ್ದಾಳೆ. ರುಂಡ-ಭಿನ್ನವಾದ ರುಂಡ! ನಾಲಗೆಯನ್ನು ಕಚ್ಚಿಕೊಂಡಿದೆ. ಉಗ್ರವಾದ ಕಣ್ಣನೋಟ. ಬಿಚ್ಚಿ ಕೆರಳಿದ ಜಡೆ–ಹಾ! ಎಂದು ರೇಚಮ್ಮ ನೀರಿನಲ್ಲಿ ಬಿದ್ದಳು. ಉಳಿದ ಸ್ತ್ರೀಯರು ಈ ಅನಾಹುತವನ್ನು ಕಂಡರು. ರುಂಡವೂ ರುಂಡವನ್ನು ಅಪ್ಪಿಕೊಂಡ ರೇಚಮ್ಮನ ದೇಹವೂ ಆ ಹರಿವ ಹೊನಲಿನಲ್ಲಿ ಹೊರಳಿ, ತೇಲಿ, ಮುಳುಗಿ, ಎದ್ದು ಮರೆಯಾಗಿ ಕೊಚ್ಚಿಹೋಯಿತು. ಸ್ತ್ರೀಯರು ಚೀತ್ಕಾರ ಮಾಡಿದರು, ಗೋಳಿಟ್ಟರು. ನದಿ, ಸ್ವರ್ಣಮುಖಿ, ನೀನೀಗ ನೋಡುತ್ತಿರುವ ಈ ಸುಂದರಿಯಾದ ಸ್ವರ್ಣಮುಖಿ ಒಂದು ದೇಹವನ್ನೂ, ಒಂದು ರುಂಡವನ್ನೂ ಹೊತ್ತುಕೊಂಡುಹೋಯಿತು. ಯಾವುದೊಂದೂ ಸಂಕಟವಿಲ್ಲದೆ ಹರಿದುಹೋಯಿತು. ತನ್ನ ಮೈ, ತನ್ನ ಅಂಗಾಂಗಗಳು ರಕ್ತಸ್ನಾತವಾಗಿದ್ದರೂ ರಕ್ತ ಬೆರೆದು ಹರಿದರೂ ಏನೊಂದೂ ವಿಷಾದ ತೋರಿಸದೆ ನದಿ ಹರಿಯಿತು, ಹಾಗೇ ಹೋಯಿತು.

ಆಮೇಲೆ, ಎರಡು ದಿನಗಳಾದಮೇಲೆ ಇಲ್ಲಿಗೆ ಸಮೀಪದಲ್ಲಿಯೆ ನೀರ ಮೇಲೆ ಬಾಗಿದ್ದ ಒಂದು ಮರಕ್ಕೆ ರೇಚಮ್ಮೆಯ ದೇಹ ತಗಲಿ ಸಿಕ್ಕಿಕೊಂಡಿತ್ತು.

ಊರಿನವರು ಆ ದೇಹವನ್ನೂ, ಅವಳು ಅಪ್ಪಿಕೊಂಡಿದ್ದ ಆಕೆಯ ಪತಿಯ ರುಂಡವನ್ನೂ ತಂದು ಸಂಸ್ಕಾರ ಮಾಡಿದರು. ನಮ್ಮ ಊರ ಅಗಸಿಯ ಬಾಗಿಲ ಹತ್ತಿರ ಒಂದು ಮಹಾಸತಿಗಲ್ಲನ್ನು ನೆಟ್ಟು ಊರಿನ ಸ್ತ್ರೀಯರಿಗೆ ಆಕೆಯ ನೆನಪನ್ನು ಸದಾ ಉಂಟುಮಾಡುತ್ತಿದ್ದಾರೆ.

ಗೌರಿ! ಅಂದಿನಿಂದ ಆ ವಂಶಜರು-ನಾವು ಈ ನದಿಯ ನೀರನ್ನು ಕುಡಿಯುವುದಿಲ್ಲ ಪತಿವ್ರತೆಯಾದ ರೇಚವ್ವೆ ಮತ್ತು ವೀರನಾದ ವಿರುಪಣ್ಣನ ನೆನಪಿಗಾಗಿ.

17-5-43.

# ಬಾಡಿಗೆ ಮನೆ

ಬಾಡಿಗೆ ಮನೆ ಕಷ್ಟ ನಿಮ್ಮಲ್ಲಿ ಕೆಲವರಿಗಾದರೂ ಗೊತ್ತು. ಇಡೀ ಜೀವ ಮಾನವನ್ನೆಲ್ಲ ಪರರ ಮನೆಯಲ್ಲಿ, ಹಣ ತೆತ್ತು ಕಳೆಯುವುದು ಎಂತಹ ಸ್ಥಿತಿ! ಆದರೇನು? ಹಾಗೂ ಆಗಬೇಕಾಗಿದೆ ಅನೇಕರಿಗೆ.

ಸೋಮಣ್ಣನಿಗೆ ಬೆಂಗಳೂರು ಬಿಡುಗಡೆಯಾಗಿ ಮೈಸೂರು ಸೇರ್ಪಡೆಯಾ ಯಿತು. ಯುದ್ಧ-ರೇಷನ್-ದುಬಾರಿ ಕಾಲ; ಇವುಗಳ ಗೊಂದಲದಲ್ಲಿ ಚಿಕ್ಕ ಊರು ಕೊಂಚ ವಾಸಿ, ಇರಬಹುದು, ಎಂದು ಬಗೆದು ನೆಮ್ಮದಿಯಿಂದಲೇ ಮೈಸೂರಲ್ಲಿ ಮನೆ ಹುಡುಕ ತೊಡಗಿದ.

ಬೆಂಗಳೂರು-ಮೈಸೂರುಗಳಲ್ಲಿ ಕೆಲವು ವಿಭಾಗಗಳಲ್ಲೆಲ್ಲ ಒಂದೇ ಕೋ ಮಿನವರೇ ತುಂಬಿದ್ದಾರೆ. ಬ್ರಾಹ್ಮಣರಲ್ಲದವರಿಗೆ ಬ್ರಾಹ್ಮಣರು ಮನೆ ಕೊಡು ವುದಿಲ್ಲ.

ಸೋಮಣ್ಣ ಹೀಗೆ ಅನೇಕ ಮನೆಗಳಲ್ಲಿ ಇಲ್ಲ ಅನ್ನಿಸಿಕೊಂಡು ತನ್ನ ಕುಲ ಇವರಿಗಿಂತ ಏತರಲ್ಲಿ ಕಡಿಮೆ? ಎಂದು ಕೇಳುತ್ತ ಮನೆಗಾಗಿ ಅಲೆದ. ಎಲ್ಲಿ ಹೋದರೂ ಈ ವ್ಯತ್ಯಾಸ. ಉಳಿದುಕೊಂಡ ಛತ್ರದಲ್ಲಿ, ಅಲ್ಲೂ ಈ ವ್ಯತ್ಯಾಸ. ಛತ್ರ ಕಟ್ಟಿಸಿದವ ಬ್ರಾಹ್ಮಣನಲ್ಲ. ಅವನೂ ಬ್ರಾಹ್ಮಣರಿಗೆ ಬೇರೆ, ಇತರರಿಗೆ ಬೇರೆ ಎಂದು ವಿಭಾಗ ಮಾಡಿದ್ದಾನೆ. ಇದಕ್ಕೇನು ಹೇಳಬೇಕು? ಏನೇನೋ ತಲೆ ಓಡಿತು, ಯೋಚಿಸಿತು. ಈ ಹಾಳು ಯೋಚನೆಗಳು ಕೇವಲ ಒಂದು ಬಾಡಿಗೆ ಮನೆ ಸಂಪಾದಿಸುವುದಕ್ಕಾಗಿ? ಇನ್ನು ಮಹಲುಗಳಲ್ಲಿ ವಾಸಿಸುವ ಚೈತನ್ಯವಿಲ್ಲ. ಇದ್ದರೆ ಹೊಂದಿಕೊಂಡ ಮನೆ, ಔಟ್‌ಹೌಸ್ ಇತ್ಯಾದಿಗಳಲ್ಲಿ. ಅದೊಂದು ಗೋಳು. ನೆರೆಹೊರೆಯ ಸಹವಾಸ, ಔಟ್‌ಹೌಸ್‌ನಲ್ಲಿದ್ದವರು ಕಡಿಮೆ ದರ್ಜೆಯವರು—ಕಾರಣ ಅವರ ಬಡತನ, ಮುಂದಿನ ಮನೆಯವರದು

ಅಧ್ಯೃತೆ, ವಿದ್ಯಾವಂತನಿಗೆ ಇದೆಲ್ಲ ಸಹಿಸಲಿಕ್ಕಾಗದು. ಜೀವನ ದುಡಿಯುವಾಗ ಅನುಭವಿಸುವ ಅಧೀನವೇ ದುಸ್ಸಹ. ಅದರ ಮೇಲೆ ವಾಸದ ಹತ್ತಿರದಲ್ಲೂ ಇದೇ ಇದ್ದರೆ? ಮನೆಯ ಮಕ್ಕಳೂ ಬಾಲ್ಯದಲ್ಲೆ ಇದನ್ನು ಅನುಭವಿಸ ಬೇಕಾದರೆ?

ಈ ಬಾಡಿಗೆ ಮನೆ ಸಹವಾಸ ಸಾಕು ಎಂದರೆ ಕೊನೆಯಾದೀತೆ? ಮುದಿತನ ಕಂಡಮೇಲೆ ಅವನಿಗೊಂದು ಮನೆಯಾಗಿದ್ದರೆ ಅವನಾಗ ಸುದೈವಿ. ಆ ಗುಡಿಸಲು ಪಡೆದು ಅದರಲ್ಲಿ ಮಲಗುವ ಸುದೈವ ಯಾವಾಗಲೊ?

ಹೀಗೆಲ್ಲ ಅನೇಕ ಭಾವನೆಗಳು ಹೊಕ್ಕು ಹೊರಕ್ಕೆ ಬಂದು ಕೆರಳಿಸು ತ್ತಿದ್ದವು. ಆದರೂ ಸುತ್ತುತ್ತಿದ್ದ ಮನೆಗಾಗಿ.

"ನೋಡಿ, ಆ ಸಂದೀಲಿ ಬಲಕ್ಕೆ ತಿರುಗಿ; ಹಳದಿ ಬಣ್ಣದ ಮಹಡಿಮನೆ ಖಾಲಿ ಇದೆ" ಎಂದ ಒಬ್ಬ.

ಬಲಕ್ಕೆ ತಿರುಗಿದರೆ ಮಹಡಿಮನೆ ಇದೆ ಸಂದಿಯಲ್ಲಿ. ಖಾಲಿಯಾಗಿಯೇ ಇರಬೇಕು. ಆದರೂ ನಾಲ್ಕಾರುಜನ ಜೋತಮುಖದಲ್ಲಿ ಕೆಂಪುಕಣ್ಣು ಬಿಟ್ಟು ಕೊಂಡು, ತಲೆ ಕೆದರಿಕೊಂಡು, ಬರಿ ಷರಟು, ಲುಂಗಿ ಸುತ್ತಿಕೊಂಡು ಕುಳಿತಿ ದ್ದಾರೆ. ಇವನ ಹ್ಯಾಟು-ಇತ್ಯಾದಿಗಳನ್ನು ನೋಡಿ ಅವರಿಗೆ ಏನೋ ಎನ್ನಿ ಸಿದೆ. ಇವನನ್ನು ಹೇಗೋ ನೋಡಿದರು. ಇವನಿಗೆ ಕೇಳೋಣವೆ? ಬೇಡವೆ? ಎನ್ನಿಸಿತು. ಕೇಳಿದರೆ ತಪ್ಪೇನು?

"ಇದು-ಈ ಮನೆ-ಖಾಲಿ ಇದೆ ಅಂತ ಅಲ್ಲಿ ಹೇಳಿದ್ರು; ಇದೆಯೆ?

"ಎಲ್ಲಿ ಹೇಳಿದ್ರು?"

"ಈ ಕಡೆ ತಿರುಗುವಾಗ ಯಾರೋ ಹೇಳಿದ್ರು."

"ಹೋ!"

"ಇದು ಖಾಲಿ ಇದೆಯೇನು?"

"ಹೇಳಿದವರನ್ನೆ ಕೇಳಿ."

ಇದೇನು ಸಹವಾಸವಪ್ಪ! ಎಂದುಕೊಂಡು ತಿರುಗಿದ. ಆದರೆ ಹಾಳು ಕುತೂಹಲ ಕೆಟ್ಟದ್ದು.

"ಅದೇನ್ರೀ ಆ ಮನೆ ಸಮಾಚಾರ?" ಎಂದು ಮರೆಯಾಗಿ ಬೀದಿಯವನನ್ನು ಕೇಳಿದ.

''ನೀವೆಲ್ಲಿ ಕೆಲಸ ಮಾಡುತ್ತೀರಿ?''

''ಅದಕ್ಕೂ ಇದಕ್ಕೂ ಏನ್ರೀ ಸಂಬಂಧ?''

''ನೀವು ಇಷ್ಟೆಲ್ಲ ವಿಚಾರಿಸೋದು ಯಾಕೆ?''

"ಬಾಡಿಗೆಗೆ ದೊರಕೀತೇನೊ ಅಂತ ಕೇಳಿದೆ. ನಾನೊಬ್ಬ ಪರಸ್ಥಳದವ."

''ಹೋಟೆಲ್ ಗರುಡಾಚಾರ್ ಅವರನ್ನು ಕೇಳಿ, ಮನೆ ಅವರದು.''

"ಓ ಸರಿ, ನಾಬಲ್ಲೆ ಅವರನ್ನ."

"ಆದರೆ ಬಾಡಿಗೆಗೆ ಕೊಡಲಾರರು."

"ಏಕೆ?"

ಮನುಷ್ಯ ಸಂಕೋಚಿಸುತ್ತ, "ಅದೊಂದು ಜೂಜಿನ ಕಟ್ಟೆ. ಆ ಮನೆ ಅದಕ್ಕಾಗಿ ಖಾಲಿ ಬಿಟ್ಟುಕೊಂಡಿದ್ದಾರೆ'' ಎಂದು ಮೆಲ್ಲಗೆ ಹೇಳಿದ.

''ಹಾಗಾದರೆ ಆ ಜನ ಅದೇ ಉದ್ಯೋಗದವರು ಎನ್ನಿ.''

''ನಮಗೇನು ಗೊತ್ತು? ನಾವು ಕೇಳಿದ್ದು.''

ಗರುಡಾಚಾರಿ ದೊಡ್ಡ ಹೋಟಲುದಾರ. ಅನೇಕಬಾರಿ ಆಹಾರಸಂಬಂಧವಾಗಿ ಅವನಿಗೆ ಜುಲ್ಮಾನೆಯಾಗಿತ್ತು. ಆದರೆ ಆತನಿಗೆ ಇದೂ ಒಂದು ದುಡಿಮೆ ಎಂಬುದು ಇವನಿಗೆ ಈಗ ತಿಳಿಯಿತು.

"ಹಾಗಾದರೆ ಇಲ್ಲಿ ಈ ಸುತ್ತಲಿನಲ್ಲಿ ಇನ್ನೆಲ್ಲೂ ಮನೆಗಳಿಲ್ಲ?"

''ನೀವು ಎಷ್ಟು ಜನ?''

"ಇಬ್ಬರು."

"ಇಬ್ಬರೂ ಗಂಡಸರೇ?"

"ಅಲ್ಲ, ನಾನೂ ನನ್ನ ಸಂಸಾರ."

"ನೋಡಿ, ಆ ಮನೆ, ಹಿಂಭಾಗದಲ್ಲಿ ಇದೆಯಲ್ಲ, ಅಲ್ಲಿ ಕೆಲವು ರೂಮು ಗಳನ್ನು ಬಾಡಿಗೆಗೆ ಕೊಡುತ್ತಾರೆ. ಬೇಕಾದರೆ ನೋಡಿ, ಆದರೆ ಹೆಂಗಸರು ಇದ್ದಾರೆ ಎನ್ನುತ್ತೀರಿ, ನಿಮಗೆ ಅದು ಆಗಲಾರದು. ನೀವು ನೋಡಿದ ಮನೆಗೂ ಅದಕ್ಕೂ ಹೊಂದಿಕೆ."

ಕುತೂಹಲ. ಹುಟ್ಟಾ ಪೋಲೀಸಿನವನಲ್ಲ. ನಮ್ಮ ನಗರ ಜೀವನ ಹೇಗಿದೆಯೆನ್ನುವುದು ಸಾಧಾರಣ ಎಲ್ಲರಿಗೂ ಹೇಗೆ ತಿಳಿದೀತು? ಕುತೂಹಲದಿಂದ ಅದನ್ನು ಹುಡುಕಿಕೊಂಡು ಹೋದ.

ಮುಖದಲ್ಲಿ ಜರ್ಬಿಲ್ಲ; ಸೌಮ್ಯಮುಖ. ಅರಿತ ಕಣ್ಣುಗಳು ಇವನು ಪೋಲೀಸು ಇಲಾಖೆಯವನಲ್ಲ ಎಂದು ಹೇಳಬಲ್ಲವು. ಆ ಮನೆಗೆ ಹೋಗಿ ಬಾಗಿಲು ತಟ್ಟಿದ. ಒಬ್ಬ ನಡುವಯಸ್ಸಿನ, ಬಿಳಿ ತೊಗಲಿನ ಹೆಂಗಸು ಬಂದಳು; ಬಾಗಿಲು ತೆರೆದಳು; ನಕ್ಕಳು. ಮುಂದಿನ ಹಲ್ಲುಗಳ ಸಂದು ಹುಳುಕು, ಕೆನ್ನೆ ಕೊಂಚ ಒಳಕ್ಕೆ, ಮೇಲೆ ಹಚ್ಚೆಯ ಗುರುತು. ಈತನಿಗೆ ಅಸಾಧ್ಯ ಧೈರ್ಯ ಬಂದು, ನೋಡಿಯೇ ಬಿಡೋಣ ಎಂದು ಮನಸ್ಸು ಮಾಡಿ, "ರೂಮಿದೆಯೆ? ನೋಡಬೇಕು" ಎಂದು ಕೇಳಿದ.

"ಬನ್ನಿ, ಅಲ್ಲಿ ನೋಡಿ" ಎಂದಳು.

ಕೆಲವು ಬರಿದು, ಕೆಲವರಲ್ಲಿ ಹೆಂಗಸರು-ಹುಡುಗಿಯರು. ನೋಡಿಕೊಂಡು ಬಂದ.

"ನೀವೆಷ್ಟು ಜನ?" ಆಕೆ ಕೊರಳು ಕೊಂಕಿಸಿದಳು.

"ಇಬ್ಬರು ಗಂಡ-ಹೆಂಡತಿ, ಒಂದು ಮಗು."

"ಹಾಗಾದರೆ ನಿಮಗ್ಯಾಕೆ ರೂಮು ?" ನಕ್ಕಳು.

''ವಾಸಕ್ಕೆ" ಎಂದ.

ಇವನೊಬ್ಬ ಪೆದ್ದು ಎಂದುಕೊಂಡು, "ನಿಮಗಿಲ್ಲಿ ಅನುಕೂಲವಿಲ್ಲ. ಬರೀ ಗಂಡಸರಾದ್ರೆ ಇರಬಹುದು" ಎಂದಳು.

ದಾರಿಯಲ್ಲಿ ಬರುತ್ತ ಯೋಚಿಸಿದ. ಏನು ಅದರ-ಆಮನೆ ವಿಚಾರ ? ಕೊಂಚ ಕೊಂಚ ಹೊಳೆಯಿತು.

ಪೋಲೀಸಿನವರೇನು ಮಾಡುತ್ತಾರೆ ? ಕಾನೂನು ಇದೆ ಅಲ್ಲವೆ ? ಇನ್ಸ್‌ಪೆಕ್ಟರ್ ಜಾತ್ರಾನಾಯಕ್ ತನಗೆ ಗೊತ್ತು. ಅವನಿಗೆ ತಿಳಿಸುವುದೆ ? ಇಂಥ ಮೋಸ ಹೊಲಸು ನಡೆಯುತ್ತಿದ್ದರೂ ತಾನು ತಿಳಿದೂ ಸುಮ್ಮನಿರುವುದೆ ? ಆದರೆ ವಿವೇಕ ಹೇಗೊ ಸುತ್ತಿಕೊಂಡು ಬಂದು ''ನಿನಗೇಕೆ ಬೀದಿ ಸಂದಿಗಳ ವಿಚಾರ? ಎಲ್ಲಿಯೊ ಯಾವುದೊ ಮನೆ ಹುಡುಕಿ ಅಲ್ಲಿರು. ಕೋರ್ಟ್‌ಗೆ ಹೋಗಬೇಕಾದ ಪ್ರಸಂಗ ತಂದುಕೊಂಡು ಫಜೀತಿಪಟ್ಟುಕೊಂಡೀಯೆ !'' ಎಂದಿತು. ಜುಗುಪ್ಸೆ ಹೊಂದಿ ಮೂರು ದಿನ ಸುಮ್ಮನಿದ್ದ. ಆದರೆ ಮನೆಯಿಲ್ಲದೆ ಗೋಪಾಳಪ್ಪನ ಛತ್ರದಲ್ಲೆ ಎಷ್ಟು ದಿನ ಇರುವುದು ?

ಅಂತೂ ಕಾಲೆಳೆದುಕೊಂಡು ಈ ಗಲೀಜು ಪೇಟೆ ಹತ್ತಿರ ಬೇಡ; ಆನೇತಪ್ಪಲು ಎಕ್ಸ್‌ಟೆನ್ಷನ್ ಹುಡುಕೋಣ, ಎಂದು ಹೊರಟ.

ಅಲ್ಲಿ ಮನೆ ಚೆಂದ, ಬಾಡಿಗೇನೂ ಚೆಂದ. ಇವನ ದುಡಿಮೆ ಅಷ್ಟು ಚೆಂದ ಇಲ್ಲೆ. ಸುತ್ತಿ, ಅಲೆದು, ತಿರುಗಿ, ಮಧ್ಯಾಹ್ನದ ಹೊತ್ತಿಗೆ ಒಂದು ಮನೆ ಪತ್ತೆ ಹಚ್ಚಿದ.

ಮನೆ ಮಾಲಕ ಇನ್ನೊಂದು ಮನೆಯಲ್ಲಿ. ಅವನನ್ನು ವಿಚಾರಿಸಲು, ಅವನ ಗೃಹಿಣಿ, ಅವನು ಇಬ್ಬರೂ ಬಂದು ''ನೀವ್ಯಾವ ಜಾತಿ ?'' ಎಂದು ಕೇಳದೆ, "ಮನೆ ನೋಡಿಕೊಂಡು ಬನ್ನಿ" ಎಂದರು.

"ಇರಲಿ, ಮನೆ ವಾಸಕ್ಕೆ ಆದರೆ ಸರಿ; ಬಾಡಿಗೆ ಹೇಳಿ'' ಎಂದ.

"ಮೊದಲು ಮನೆ ನೀವು ಒಪ್ಪುವುದು; ಆ ಮೇಲೆ ಬಾಡಿಗೆ ಮಾತಾಡೋಣ" ಎಂದ ಮನೆಯಾತ.

"ಮೊದಲು ಬಾಡಿಗೆ ಹೇಳಿ, ನಮಗೆ ಸರಿಯಾದರೆ ಆ ಮೇಲೆ ಮಾತು"–ಇವನ ವಾದ. ಅವನು ಬಾಡಿಗೆ ತಿಳಿಸಿದ. ಈತ ಆದೀತು ಎಂದುಕೊಂಡು ಮನೆ ನೋಡಲು ಹೋದ.

ಕೊಂಚ ವಿಶಾಲವಾದ ರಸ್ತೆಯಲ್ಲಿ ಕಾಂಪೌಂಡಿಗಾಗಿ ಸ್ಥಳ ಬಿಟ್ಟು ಎರಡು ಅವಳಿ ಮನೆ ಹೊಂದಿರುವಂತೆ ಕಟ್ಟಿದ್ದರು. ಒಂದರಲ್ಲಿ–ಅವರು ಮಂಗಳೂರು ಕಡೆಯವರಿರಬಹುದು – ದಸರೆ ನೋಡಲು ಬಂದೆವೆಂದವರು ಡಿಸೆಂಬರ್ ಮುಗಿಯುವತನಕ ಇದ್ದರು. ಅವರೆ ಈ ಹೊಂದಿಕೊಂಡ ಮನೆಯ ಬೀಗ ಇಟ್ಟುಕೊಂಡು ಬಂದವರಿಗೆಲ್ಲ ಮನೆ ತೋರಿಸುತ್ತಿದ್ದರಂತೆ.

ಈತ ಬಂದು ಕೇಳಲು, ಒಂದು ಮಗು ಒಳಕ್ಕೆ ಹೋಗಿ ಹೆಂಗಸೊಬ್ಬಳನ್ನು ಕರೆತಂದಿತು. ಈತ "ನಿಮ್ಮಲ್ಲಿ ಗಂಡಸರಾರೂ ಇಲ್ಲವೆ?" ಎಂದ.

"ಅವರೆಲ್ಲ ಬೊಂಬಾಯಿನಲ್ಲಿ."

"ಈ ಮನೆ ನೋಡಬೇಕಿತ್ತು."

"ನೋಡಬಹುದಲ್ಲ, ತೋರಿಸುತ್ತೇನೆ" ಎಂದಳಾಕೆ.

ಸೋಮಣ್ಣನಿಗೆ ಪ್ರಪಂಚ ವಿಲಕ್ಷಣವೆನ್ನಿಸಿತು. ಆಕೆ ಬೀಗ ತಂದಳು. ಮನೆಯೆಲ್ಲವನ್ನೂ ತೋರಿಸಿದಳು. ಮಲಗುವ ಮನೆ, ಅಡಿಗೆ ಮನೆ, ಬಚ್ಚಲು, ಕಕ್ಕಸು ಎಲ್ಲ ನೋಡಿದ. ಆದರೆ ಇವನು ಅವುಗಳನ್ನು ನೋಡಲು ತೋರಿದ ಆಸಕ್ತಿಗಿಂತ ಇವಳನ್ನು ನೋಡಲು ತೋರಿದ ಆಸಕ್ತಿಯೇ ಹೆಚ್ಚು; ಇದೇ ಒಂದು ಅವಕಾಶ ಎಂದುಕೊಂಡ. ಆಕೆ ಹಾಗಿದ್ದಳು!

ಲೋಕದಲ್ಲಿ ಚೆಲವು ಎಲ್ಲೆಲ್ಲೂ ಇದೆ. ಹುಡುಕಿ ನೋಡಿ ಅರಿಯಬೇಕಾದುದೂ ಒಂದು ಬಗೆ; ಅನಿರೀಕ್ಷಿತವಾಗಿ ಒಂದೊಂದು ವೇಳೆ ಕಣ್ಣಿಗೆ ಬೀಳುವುದೂ ಒಂದು ಬಗೆ.

ಚೆಲುವಿನಿಂದ ಮುಗ್ಧರಾಗದವರು ಯಾರು? ಇವನು ಅವಳನ್ನು ನೋಡಿದನು. ಅವಳ ಹಾಸ, ಅವಳ ನಿಲವು, ಅವಳ ನಗೆ, ಅವಳ ಮಾತು, ಇವನಿಗೆ ಪರಮ ಆಹ್ಲಾದಕರವೆನ್ನಿಸಿತು. ಸ್ತ್ರೀಯರೊಂದಿಗೆ ಸರಳತೆನದಿಂದ ಮಾತನಾಡುವುದು ಇವನಿಗೆ ಹೊಸದೆನಿಸಿರಲಿಲ್ಲ. ಅನೇಕ ಜನರೊಂದಿಗೆ ಅಕ್ಕತಂಗಿಯರಂತೆ, ಸರಳತೆ, ಮಮತೆಗಳಿಂದ ಮಾತನಾಡಿದ್ದನು. ಇವಳೂ ಒಬ್ಬಳು ಅಂತಹ ಹೆಣ್ಣೆ? ಎನ್ನಿಸಿತು. ಆದರೆ ಕೇವಲ ಅಪರಿಚಿತ, ಮನೆ ಬಾಡಿಗೆಗೆ ಬಂದವನು, ಇವಳು ಮನೆಯೊಡತಿಯೂ ಅಲ್ಲ. ವಿಲಕ್ಷಣ, ಇವನಿಗೆ ಎಲ್ಲದೂ ವಿಲಕ್ಷಣವೆನ್ನಿಸಿತು. ಹಿಂದಿನ ಅನುಭವದ ಹಿನ್ನೆಲೆ ಇನ್ನೂ ಪ್ರಬಲವಾಗಿತ್ತು ಮನಸ್ಸಿನಲ್ಲಿ. ಇವಳ ಉದ್ಯೋಗವೂ ಹಿಂದಿನ "ಆಕೆ" ಯಂತೆ ಇರಬಹುದೊ? ಎಂದು ಒಂದೊಂದು ವೇಳೆ ಈ ಪ್ರಪಂಚದ ಕಪಟ ವರಿಯದ ಅವನ ಮನಸ್ಸಿನಲ್ಲಿ ಹೊಳೆಯುವುದು. ತನ್ನ ವಾಸಕ್ಕೆ ಅಂತಹ ನೆರೆಯೆ? ಛೀ! ಅದಿರಲಾರದು. ಇವಳ ಸರಳತನವೆ ಇದಕ್ಕೆ ಸಾಕ್ಷಿ. ಆದರೆ ಅಪರಿಚಿತ? ಏನೊ? ತಿಳಿಯದು.

ಅವಳು ಇವನಿಗೆ ಮನೆ ತೋರಿಸಿ ಇಷ್ಟಕ್ಕೇ ಬಿಡಲಿಲ್ಲ.

"ನಮ್ಮ ಮನೆಯೂ ಇದರಂತೆ ಇದೆ, ನೋಡಬಹುದು" ಎಂದಳು. ಅವರ ಮನೆಯನ್ನು ನೋಡಿದ. ಎರಡು ರೂಮುಗಳಲ್ಲಿ ಇಬ್ಬರು ಹೆಂಗಸರು ಅನಾಸಕ್ತಿಯಿಂದ ಮಲಗಿದ್ದರು. ಇದು ಅವನ ಸಂಶಯವನ್ನು ವೃದ್ಧಿಪಡಿಸಿತು. ಹಗಲು ಹತ್ತು ಹನ್ನೆರಡು ಗಂಟೆಗೇ ಮಲಗುವುದೆಂದರೆ? ಒಬ್ಬ ಮುದುಕಿ ಅಡಿಗೆ ಮಾಡುತ್ತಿದ್ದಳು. ಅವಳಾದರೂ ಇವನೊಂದಿಗೆ ಮಾತನಾಡಲು ಬರಲಿಲ್ಲ. ಒಬ್ಬ ಹುಡುಗ 22-24 ವರ್ಷವಿದ್ದರೂ ಹುಡುಗನಹಾಗಿದ್ದವ, ಕೆಂಪು ಕಲ್ಲಿನ ಕಡುಕು ಕಿವಿಗೆ ಹಾಕಿ, ತೆಳ್ಳಗೆ ಉದ್ದನಾಗಿ ಬೆನ್ನು ಬಾಗಿದವ, ಮನೆಯ 'ಗಂಡಸರು' ಎಂಬ ವಿಶೇಷಣದಲ್ಲಿ ಗಣನೆಯಾಗದವ, ಅವನೂ ಇದ್ದ ಓಡಾಡಿಕೊಂಡು.

"ಈ ಹುಡುಗ ಯಾರು?" ಅವನು 'ಹುಡುಗ' ತಾನೇ?

"ಈತ ತೀರ್ಥಹಳ್ಳಿಯವನು, ಸುಮ್ಮನೆ ಊಟ ಮಾಡಿಕೊಂಡಿದ್ದಾನೆ. ಪೇಟೆಯಿಂದ ಕಾಯಿ-ಪಲ್ಯ ಸಾಮಾನು ತಂದುಕೊಡುತ್ತಾನೆ."

ಸರಿ, ನೆಪಮಾತ್ರಕ್ಕೊಬ್ಬ ಗಂಡುಹುಡುಗ! ಅವನನ್ನು ಯಾವ ಕೆಲಸಕ್ಕಾದರೂ ಇಟ್ಟುಕೊಳ್ಳಬಹುದು.

"ಆ ಹೆಂಗಸರು?" ಬಲು ಸಂಕೋಚದಿಂದ ಕೇಳಿದ.

"ಇಬ್ಬರೂ ನಮ್ಮವರೆ; ಒಬ್ಬಳು ನನ್ನ ಅಕ್ಕ; ಇನ್ನೊಬ್ಬಳು ನನ್ನ ಚಿಕ್ಕಮ್ಮನ ಮಗಳು."

"ಅವರ‍್ಯಾಕೆ ಹಗಲುಹೊತ್ತಿನಲ್ಲೆ ಮಲಗಿದ್ದಾರೆ?" ಜೀವ ಹಿಡಿದುಕೊಂಡು ಈ ಪ್ರಶ್ನೆ ಕೇಳಿದ.

"ಇಬ್ಬರಿಗೂ ಮಲೇರಿಯ; ಈ ಊರಿಗೆ ಬಂದ ಮೇಲೆ ಕಾಯಿಲೆ ಬಂತು."

ಈ ಮಾತಿನಲ್ಲಿ ಇವನಿಗೆ ನಂಬಿಕೆ ಆಗಲಿಲ್ಲ. ಯಾವ ಆಯಾಸದಿಂದ ಈ ಬೆಳಗಿನ ಹೊತ್ತಿನಲ್ಲೆ ನಿದ್ದೆ ಮಾಡುತ್ತಿರಬಹುದು? ಎಂದು ಒಂದು ಸಲ ಕೇಳಿಕೊಂಡ.

ಎಲ್ಲಿಯ ಈ ಹಾಳು ಸಹವಾಸ? ಹೊರಟುಹೋಗೋಣ ಎನ್ನಿಸುತ್ತಿದೆ; ಆದರೆ ಹೋಗಲಾರ. ಮನೆಯೊಂದು ಬೇಕೇಬೇಕು.

"ನಿಮ್ಮ ಯಜಮಾನರೆಲ್ಲಿ?" ಎಂದು ಕೇಳಿದ.

ಈ ಪ್ರಶ್ನೆ ಆಕೆಗೆ ವಿನೋದವಾಗಿ ಕಂಡಿತು.

ನಗುತ್ತ ಹೇಳಿದಳು.

"ಬೊಂಬಾಯಿನಲ್ಲಿ."

"ನೀವು ಮಂಗಳೂರಿನವರು ಎನ್ನುತ್ತೀರಿ! ನೀವು ಇಲ್ಲಿ. ನಿಮ್ಮ ಯಜಮಾನರು ಬೊಂಬಾಯಿನಲ್ಲಿ?"

ವಿನೋದದಿಂದಲೆ ಹೇಳಿದಳು. "ಅವರೆ ಬಂದು ಬಿಟ್ಟುಹೋದರು; ದಸರೆಗಾಗಿ ಬಂದಿದ್ದೆವು. ಇವರು ಕಾಯಿಲೆ ಬಿದ್ದರು; ಅದಕ್ಕಾಗಿ ಇಲ್ಲೆ ಇದ್ದೇವೆ; ಡಾಕ್ಟರು ಬರುತ್ತಾರೆ."

ಇವರ ಗಂಡಂದಿರೆಲ್ಲಿ? ಎಂದು ಕೇಳಬೇಕೆನ್ನಿಸಿತು, ಆದರೆ ಧೈರ್ಯ ವಾಗಲಿಲ್ಲ. ಇವನು ನಕ್ಕ, ಅವಳೂ ನಕ್ಕಳು.

ಇವಳನ್ನು ನೋಡುತ್ತ ತನ್ನ ಹೆಂಡತಿಯನ್ನು ನೆನೆಸಿಕೊಂಡ. ವ್ಯತ್ಯಾಸ ಮನಸ್ಸಿಗೆ ವಿಷಾದ ತಂದಿತು! "ಈಕೆ ಎಂತಹ ಹೆಣ್ಣು!" ಎಂದುಕೊಂಡ.

ಪ್ರಕೃತಿಯು, ಆ ನಾಡಿನ ಹೆಂಗಸರು ಚೆಲುವೆಯರಾಗಿ ಹುಟ್ಟುವಂತೆ ಮಾಡಿದ್ದಾಳೆ. ಅವಳನ್ನು ದಿಟ್ಟಿಸಿ ನೋಡಿದಷ್ಟು ಅವಳ ಸೌಂದರ್ಯವು ಇವನಿಗೆ ಸ್ಫುಟವಾಯಿತು. ಅವಳ ಶರೀರ, ಅವಳ ಮೈಕಾಂತಿ, ಅವಳ ತೋಳು, ಕೆನ್ನೆ, ಹಣೆ, ಕೇಶ ಯಾವುದರಲ್ಲಿಯೂ ರೂಪಕ್ಕೆ ಕೊರತೆಯಿಲ್ಲ. ಅವಳ ಕಲಕಂಠ, ನಿಲುವು, ತೋಳನ್ನು ಎತ್ತಿದಾಗ ಚಿತ್ತವನ್ನು ಜಾರಿಸುವ ಅವಳ ಎದೆ, ಅದು ಮರೆಯನ್ನು ಕಳಚಿ ಕಾಣುವ ಬಗೆ, ಈ ನಿರ್ಭಾಗ್ಯನಿಗೆ ಅಂದು ಅತಿ ಸಮೀಪದಲ್ಲೆ ತೋರಿಬಂದವು. ತನ್ನ ಜೀವನದ ಮಹಾಕೊರತೆ ಅಂದೆ, ಆ ಮುಹೂರ್ತದಲ್ಲೆ, ಅವಳನ್ನು ಕಂಡು ಮಾತನಾಡಿಸಿದಾಗಲೆ ಸ್ಫುಟವಾದಂತಾಯಿತು. ನಿರಾಡಂಬರವಾದ ಬಿಳಿ ಉಡುಗೆಯನ್ನುಟ್ಟ ಅವಳು ಬಿಳಿ ತಾವರೆಯಂತೆ ಕಂಡಳು. ಆಸೆಯ ಹಸಿವಿನಿಂದ ಕಣ್ಣಿಗೆ ತೋರಿಬಂದ ದೇಹಭಾಗವನ್ನೆಲ್ಲ ದಿಟ್ಟಿಸಿದನು.

ಆದರೂ ಹಿಂದಿನ ದಿನದ ಅನುಭವ–ಬೀದಿ ಹೆಣ್ಣುಗಳ ಮನೆ–ಮೈ ಜುಮ್ಮೆಂದಿತು. ಇದೆಲ್ಲಿಯ ಸಹವಾಸ! ಮತ್ತೆ ಕೇಳಿಕೊಂಡನು.

ಆದರೆ ಇವಳ ಈ ಸರಳತೆ! ಜನರ ವೃತ್ತಿ ಇಂಥದು ಎಂದು ನಿರ್ಣಯಿಸಲು ತನ್ನ ಅನುಭವ ಸಾಲದು ಎಂದು ತನಗೇನು ಗೊತ್ತು?

ಆದರೇನು? ಇವಳ ಸ್ನೇಹ, ಇವಳ ಜೊತೆ ಒಡನಾಟ, ಹತ್ತಿರದ ವಾಸ ಅವಕಾಶ ಸಿಕ್ಕಾಗ ಏತಕ್ಕೆ ಬೇಡ? ಮನೆಯನ್ನು ಬಾಡಿಗೆಗೆ ತೆಗೆದುಕೊಂಡೇ ಬಿಡುವುದು. ಹೆಂಡತಿ? ಏನೋ ನಿರ್ಧಾರ ಮಾಡಿಕೊಂಡ. ತೃಪ್ತವಾಗದ ಆಶೆ, ಅನಾಯಾಸವಾಗಿ, ಅಯಾಚಿತವಾಗಿ, ಪೂರ್ಣವಾಗ ಬಂದರೆ ಬಿಡುವವನೊಬ್ಬ ಮುಟ್ಠಾಳ! ಎನ್ನಿಸಿತು.

"ನಮಗೂ ಒಳ್ಳೆ ನೆರಬೇಕು; ನೀವು ಈ ಮನೆಗೆ ಬನ್ನಿ" ಎಂದು ಆಕೆ ಬಲವಂತ ಮಾಡಿದಳು. "ಬರುತ್ತೇವೆ" ಎಂದ. ಆದರೆ ಬಹುವಚನ ಏಕೆ ಹೇಳಿದೆನೊ ಎಂದುಕೊಂಡ.

'ಖಂಡಿತ ಬರುತ್ತೀರಾ?' ಎಂದು ಕೇಳುವ ಹಾಗೆ ಅವಳ ಮಾತಿನಲ್ಲಿ ನಗೆ, ಕಣ್ಣಲ್ಲಿ ನಗೆ, ಮೈ ಕಾಂತಿಯಲ್ಲಿನ ನಗೆ ಭಾಸವಾಯಿತು.

ಯಾವುದೋ ಸುಖದ ಅಂಚಿನಲ್ಲಿ ತಾನಿದ್ದಾನೆ ಎನ್ನಿಸಿತು. ನಾಲ್ಕಾರು ಬಾರಿ 'ಹೋಗಿ ಬರುತ್ತೇನೆ' ಎಂದ. ನಾಲ್ಕಾರು ಬಾರಿ 'ಬನ್ನಿ' ಎಂದಳು. ನಾಲ್ಕಾರು ಬಾರಿ ನಕ್ಕ; ಅವಳೂ ನಾಲ್ಕಾರು ಬಾರಿ ನಕ್ಕಳು.

ಏನೋ ಅಮಲಿನಲ್ಲಿದ್ದವನಾಗಿ, ಈ ಕೊಂಕಣಿ ಹುಡುಗಿಯನ್ನೆ ಸ್ಮರಿಸುತ್ತ ಮನೆಯವನಲ್ಲಿಗೆ ಹೋಗಿ, ಎರಡು ತಿಂಗಳು ಮುಂಗಡ ಹಣ ಕೊಟ್ಟು ರಸೀತಿ ಕೇಳಿದ. ಅವನು "ಹನ್ನೊಂದು ತಿಂಗಳು ಕರಾರು ಬರೆದು ಕೊಡಬೇಕು; ಸಾಯಂತ್ರ ಬನ್ನಿ" ಎಂದ.

ಹೋಗುವಾಗೊಂದು ಬಾರಿ ಅವಳ ಮನೆಗೆ ಹೋದ; ಅವಳಿಗೆ ವಿನೋದ. ತಿರುಗಿ ಹೋಗಿ ಮತ್ತೆ ನೋಡಿಕೊಂಡುಹೋದ. ಅವಳ ತಾಳ್ಮೆ ಕೆಟ್ಟಿರಲಿಲ್ಲ.

ಛತ್ರಕ್ಕೆ ಬಂದು, ಹೆಂಡತಿಗೆ "ಮನೆ ಸಿಕ್ಕುವುದು ದುರ್ಲಭ; ನಾನು ಹೋಟೆಲಿಗೆ ಸೇರುತ್ತೇನೆ" ಎಂದು ತಿಳಿಸಿ, ಅವರನ್ನು ಊರಿಗೆ ಸಾಗಹಾಕಲು ತಾನೇ ಹೋಗಿ ಕಳಿಸಿ ಬಂದ. ಜನರೇನಾದರೂ ಆಡಿಕೊಂಡರೊ? ಎನ್ನಿಸಿತು. ಅರಿಯದ ಊರು. ಬಾಡಿಗೆಗೆ ಯಾರಾದರೇನು ಇರಬಹುದು. ತಾನೊಬ್ಬನು ತಾನೆ ಆ ಮನೆಯಲ್ಲಿರುವುದು? ಸ್ವಚ್ಛಂದವಾಗಿ ಇರುವಷ್ಟು ಕಾಲ..........ಅದರಲ್ಲೇನು ಪಾಪ? ಕೇವಲ ಸಾಮೀಪ್ಯ....... ... ಸಂಭಾಷಣೆ ..............ತನಗೆ ತಾನೆ ಮೋಸ ಮಾಡಿಕೊಳ್ಳುತ್ತಿದ್ದಾನೆಂದು ನಗುವೊಮ್ಮೆ. ಆದರೆ ಇಷ್ಟು ಸುಲಭವಾಗಿರುವಾಗ?

ಹೆಂಡತಿಯನ್ನು ಕಳಿಸಿ, ಚಿಂತೆ ಹರಿಯಿತೆಂದು ಮರಳಿ ಬಂದ. ಬಂದವನು ನೇರವಾಗಿ ಅಲ್ಲಿಗೆ ಹೋದ. ಮನೆ ಬಾಗಿಲು ಹಾಕಿತ್ತು. ಅವರೇನಾದರೂ ಆಸ್ಪತ್ರೆಗೆ ಹೋಗಿರಬಹುದೊ ಎಂದುಕೊಂಡ.

ಮನಶ್ಚಾಪಲ್ಯ-ಅದನ್ನು ಯಾರು ತಡೆಯಲಿಕ್ಕಾದೀತು ?

ಬಾಗಿಲು ತಟ್ಟಿದ; ಮನಸ್ಸು ತುಡಿದುಕೊಂಡಿತು ಅರಿಯದ ಒಂದು ಹರ್ಷಾತಿರೇಕದಿಂದ.

ಯಾರೂ ಬಾಗಿಲು ತೆರೆಯಲಿಲ್ಲ. ಕಾದಿದ್ದು ಪುನಃ ತಟ್ಟಿದ. ಯಾರೂ ಬರಲಿಲ್ಲ. ಕ್ಷೀಣವಾದ ನರಳಿದ ಶಬ್ದ, ಕೊಂಚ ಕೆಮ್ಮುವುದು-ಅದು ಸ್ತ್ರೀ ಕೊರಳು-ಕೇಳಿಸಿತು. ಮತ್ತೆ ತಟ್ಟಿದ, ಆಗಲೂ ಅದಕ್ಕೆ ಉತ್ತರವಿಲ್ಲ. ಆ ಹರಿಣಿ ಎಲ್ಲಿ ಹೋದಳೊ ? ಎಂದುಕೊಂಡ. ನೆರೆಯವರು, ಆಚೆ ಬೀದಿಯವರು ಇವರನ್ನೆಲ್ಲ ಗಮನಿಸಿದ. ಯಾರೂ ಇವನ ಕಡೆ ಲಕ್ಷ್ಯ ಕೊಟ್ಟಿರಲಿಲ್ಲ. ಕೊಂಚ ಹೊತ್ತಿದ್ದು ಈಚೆಗೆ ಬಂದನು. ಬಂದು ನೆರೆಯವನೊಬ್ಬನನ್ನು ಕೇಳಿದ: "ಈ ಮನೆಯವರೆಲ್ಲಿ ?"

ಆತ, "ಒಬ್ಬರಿಗಂತೂ ಸಖತ್ ಕಾಯಿಲೆ; ಡಾಕ್ಟರು ಬಂದುಹೋದರು. ಆಗಲೋ ಈಗಲೋ ಅನ್ನುವ ಹಾಗಿದೆ."

"ಏನು ಕಾಯಿಲೆ ಅದು ?"

"ಇಬ್ಬರು ಹೆಂಗಸರಿಗೂ ಕ್ಷಯ !"

ಈತ ಈ ಮೂರು ಶಬ್ದಗಳನ್ನು ಕೇಳಿ ಬೆಚ್ಚಿದ. ಅವನು ಮುಂದುವರಿಸಿದ: "ಆ ಮನೆಗೆ ಅದೇ ಕಾರಣಕ್ಕಾಗಿ ಯಾರೂ ಬಾಡಿಗೆಗೆ ಬರುವುದಿಲ್ಲ. ಆ ಹೆಂಗಸಿಗೆ ಈ ಕಾಯಿಲೆಯವರ ಸಹವಾಸದಿಂದ ಜೀವಮಾನ ರೋಸಿ ಹೋಗಿದೆ."

"ಹಾಗೇನು !"

''ಹೌದು; ಮನೆಯುವನು ಇವರಿಗೆ ಮನೆ ಬಾಡಿಗೆ ಕೊಟ್ಟ ತಿಳೀದೆ. ಬಿಡಿಸೋ ಹಾಗಿಲ್ಲ. ಬೇರೆ ಯಾರೂ ಆ ಮಗ್ಗಲು ಮನೆಗೆ ಬರೋಲ್ಲ. ಈ ಹೆಂಗಸು ಯಾರಾದರೂ ಬಂದಾರೆ, ತನ್ನ ಬೇಜಾರು ಕಳೆದೀತೆ ಎಂದು ಬಂದವರಿಗೆಲ್ಲ ಬಲು ಪ್ರೋತ್ಸಾಹಿಸುತ್ತಾಳೆ. ಅಲ್ಲದೆ ಆ ಜನವೆ ಬಹಳ ಸ್ನೇಹ ಸ್ವಭಾವದ ಜನ. ಈಕೆ ಅದರಲ್ಲೂ ಎಷ್ಟೊ ಆದರದಿಂದ ಮಾತನಾಡ್ತಾಳೆ. ಆದರೆ ಯಾರು ಈ ರೋಗದ ಗುಣೀಗೆ ಬರ್‍ತಾರೆ ಹೇಳಿ? ನೀವು ಮನೆ ಹುಡುಕೊ ಹಾಗೆ ಕಾಣಿಸುತ್ತದೆ ?''

"ಹೌದು ....... .......ಇಲ್ಲ...............ಇಲ್ಲ". ಏನೂ ಹೇಳಲಾರದವನಾಗಿ ಹೊರಟುಬಂದ.

ಸೋಮಣ್ಣನಿಗೆ ಅಗೋಚರವಾಗಿ ಹೊರಲಾಗಿದ್ದ ಒಂದು ಭಾರ ಥಟ್ಟನೆ ಕಳಚಿದಂತಾಯಿತು. ಆದರೂ ಮನಸ್ಸಿನ ಚಾಪಲ್ಯ, ಅದಕ್ಕಾಗಿ ತಾನುಪಟ್ಟ ಶ್ರಮ, ನಷ್ಟ, ಹನ್ನೊಂದು ತಿಂಗಳ ಬಾಡಿಗೆ ಪತ್ರ, ಹೆಂಡತಿ-ಮಗುವನ್ನು ಊರಿಗೆ ಸಾಗಹಾಕಿದುದು ಎಲ್ಲ ನಾಟಕೀಯವಾಗಿ ಕಂಡವು.

ದೀರ್ಘವಾಗಿಯೆ ಯೋಚಿಸಿದನು.

ಅನನುಭವ, ಪೆಚ್ಚುತನ, ಹುಚ್ಚುಆಶೆಗಳಿಗಾಗಿ ನಗು ಬಂದಿತು.

ನಿಂತ ನೆಲವೆ ಕಡಿದು ಕಮರಿಯೊಳಕ್ಕೆ ಬೀಳುವುದು ತಪ್ಪಿತಲ್ಲ! ಇದೇ ಒಂದು ದೊಡ್ಡ ಸಮಾಧಾನ.

ಆದರೂ ನಿರಾಶೆ. ವ್ಯಕ್ತವಾಗಿ ಮನಸ್ಸಿಗೆ ಹೇಳಿಕೊಳ್ಳುವಂತಿಲ್ಲ.

ಹೇಗಿದ್ದಳು ಆ ಪಡುವಲು ತೀರದ ಹೆಣ್ಣು!

೭-11-44.

# ಮಾನವಂತ

ಓಬಲಪ್ಪನಿಗೆ ಯಾವುದೂ ಕೊರತೆಯಿಲ್ಲ. ಈಚೆಗಂತೂ ಏರ್‌ಕ್ರಾಫ್ಟ್‌ನಲ್ಲಿ ಕೆಲಸಕ್ಕೆ ಸೇರಿದ ಮೇಲೆ ತಾನೂ ಒಬ್ಬ ವ್ಯಕ್ತಿ ಅಂದುಕೊಂಡಿದ್ದಾನೆ. "ನೂರು ರೂಪಾಯಿ ಸಂಬಳ ತರುತ್ತೇನೆ" ಎಂಬ ಹುಮ್ಮಸ್ಸು ಇದೆ. ಇದೆ, ಇರಬಾರದು ಏಕೆ? ಆಗಾಗ್ಗೆ ಮಾತನಾಡುವಾಗ ತಾನು ದೊಡ್ಡ ಮನುಷ್ಯನ ರೀತಿಯಲ್ಲಿ ಮಾತನಾಡಬೇಕು ಎನ್ನಿಸುತ್ತದೆ ಮನಸ್ಸಿಗೆ. ಸ್ವಲ್ಪ ಜರ್ಬರ ಬೇಕು; ದೊಡ್ಡವರ ಸ್ನೇಹಸಂಬಂಧಗಳು ತನಗಿವೆ ಎನ್ನುವುದನ್ನು ಪರರಿಗೆ ತೋರಿಸಬೇಕು. ತಾನು, ತನ್ನ ಹೆಂಡತಿ, ಮಗು ಎಲ್ಲ ನೆಮ್ಮದಿಯಿಂದ ಇದ್ದು, ಪಕ್ಕದ ಮನೆಯವರು ಆಚೆ ಮನೆಯವರು—ಇವರಿಗಿಂತ ಅಂತಸ್ತಿನಲ್ಲಿ ಏರಿ ಕಾಣಬೇಕು, ಎಂಬ ಹಂಬಲ. ಹಂಬಲದಲ್ಲೇನು ತಪ್ಪು? ಏನೋ ಜನ ಕೂಡಿದಾಗ ಮಾತು ಉಚಾಯಿಸಿ, ಜಡ್ಜಿ ಪುಟ್ಟಯ್ಯನವರು, ಡಾಕ್ಟರ್ ರಾಮಣ್ಣನವರು, ಬಸ್ ಸರ್ವಿಸ್ ಪ್ರೊಪ್ರೈಟರ್ ಹರಿಯಪ್ಪನವರು ಇವರೆಲ್ಲ ತನ್ನೊಡನೆ ಸಂಬಂಧ ಬೆಳಸಬೇಕೆಂದಿದ್ದರೆಂದೂ ಆದರೆ ಏನೊ ಋಣಾನುಸಂಬಂಧದಿಂದ ತಾನು ಬೇರೆ ಮದುವೆಯಾಗಬೇಕಾಯಿತೆಂದೂ ಹೇಳುವನು. ತನಗೆ ಸಬ್ ಡಿವಿಜನ್ ಆಫೀಸರ್ ಪುಟ್ಟರಾಮಯ್ಯನವರು ಹತ್ತಿರದ ಜ್ಞಾತಿಗಳೆಂದೂ ಯಾರೊಂದಿಗೊ ಹೇಳಿದ್ದ. ಆ ಪುಟ್ಟರಾಮಯ್ಯನವರಿಂದ ಕೆಲಸವಾಗಬೇಕೆಂದಿದ್ದ ಪುಟ್ಟಬಸಪ್ಪ "ನಿಮಗೆ ಓಬಲಪ್ಪ, ಮೇಸ್ತ್ರಿ ಕೆಂಪಣ್ಣನ ಮಗ ಓಬಲಪ್ಪ—ಏರ್‌ಕ್ರಾಫ್ಟ್‌ನಲ್ಲಿ ಕೆಲಸವಿದೆ—ಆತ ಬಂಧುವಂತೆ?" ಎಂದು ಕೇಳಿಯೇ ಬಿಟ್ಟ.

'ಆತ ಯಾರೊ ನನಗೆ ತಿಳಿಯದು' ಎಂದು ಪುಟ್ಟರಾಮಯ್ಯನವರು ಹೇಳಿದ್ದರು. ಇದನ್ನು ಕೇಳಿ ಸುಮ್ಮನೆ ಬಿಟ್ಟನೆ ಈ ಪುಟ್ಟಬಸಪ್ಪ? "ಯಾಕೊ ಓಬಲಿ ಹೀಗೆ ಬರುಡೆ ಹೊಡೀತಿ? ನಾನರೀನೆ ನಿನ್ನ ಬೇಳೆಕಾಳು?" ಎಂದು ಎತ್ತಿ ಮೂದಲಿಸಿದ್ದ.

ಇವನ ಹೆಂಡತಿಯದು ಇನ್ನೊಂದು ಬಗೆ. ಇವನು ಮಾತಿನಿಂದ, ಬಡಾಯಿಯಿಂದ ತನ್ನ ಅಂತಸ್ತನ್ನು ಹೆಚ್ಚಿಸಬೇಕೆಂದಿದ್ದರೆ ಆ ಗೃಹಿಣಿ ತನ್ನ ಶಿಸ್ತಿನಿಂದ ತನ್ನ ಅಂತಸ್ತನ್ನು ಹೆಚ್ಚಿಸಿಕೊಳ್ಳಬೇಕೆನ್ನುತ್ತಾಳೆ. ತಲೆಯಕೂದಲು ಎದ್ದು ಉಬ್ಬಿ ಹೊರಳಿರುವಂತೆ ಕಾಣಲು ಬಾಚುತ್ತಾಳೆ. ಎಲೆ ಅಡಿಕೆ ಕೊಂಚ ರಂಗು ತುಟಿಯಮೇಲೆ ಯಾವಾಗಲೂ ನಿಂತಿರುತ್ತದೆ. ಕೆನ್ನೆ ಹಣೆಗೆ ಪೌಡರ್ ಹಚ್ಚಿರುತ್ತಾಳೆ. ಆದರೆ ಕಿವಿ, ಹಣೆಯಲ್ಲಿ ಕೂದಲು ಸೇರುವಕಡೆ ಬಿಳಿಪುಡಿ ಹಾಗೆ ಉಳಿದಿರುತ್ತದೆ. ಸೀರೆಯನ್ನು ನಿರಿ ನೆಲಗುಡಿಸುವಂತೆ ಉಡುತ್ತಾಳೆ; ನಡೆಯುವಾಗ ಮೈ ಭುಜ ಇತ್ಯಾದಿಗಳನ್ನು ಹೊರಳಿಸಿ, ನಿರಿಗೆ ಚಿಮ್ಮುತ್ತ ನಡೆಯುವುದೊಂದು ದೊಡ್ಡತನವೊ ಅಥವ ಸೊಗಸೊ ಎನ್ನುವಂತೆ ನಡೆಯುತ್ತಾಳೆ.

ಓಬಲಿ ತನ್ನ ಹೆಂಡತಿ ವಿಚಾರ ಏನೊಂದೂ ಎತ್ತುವುದಿಲ್ಲ. ಅನೇಕರು ತಮ್ಮ ಹೆಂಡಂದಿರನ್ನು 'ನಮ್ಮ ಹೆಂಗಸರು' ಎಂದು ಮಾತ್ರ ಹೇಳಿ ಅಷ್ಟಕ್ಕೆ ಸುಮ್ಮನಾಗುತ್ತಾರೆ. ಸರ್ಕಾರದ ಕೆಲವು ವಿಚಾರಗಳ ಬಗ್ಗೆ ಪ್ರಕಟ ರೀತಿಯಿಂದ ಹೇಗೆ ವಿವರವಾಗಿ ಮಾತನಾಡಲು ಸಾಧ್ಯವಿಲ್ಲವೊ ಹಾಗೆಯೆ ಇಂಥವರ ಈ 'ನಮ್ಮ ಹೆಂಗಸರ' ವಿಷಯ.

ಪುಟ್ಟಶಾಮಿಗೆ ಇವರ ಮನೆಗೆ ಹೋಗಿಬರುವ ಸಲೀಸು. ಅವನು ಒಬ್ಬ ಫೋಟೋಗ್ರಾಫರ್. ತಲೆ ಕ್ರಾಪ್‌ಕೂದಲು ಉದ್ದ ಬಿಡುತ್ತಾನೆ. ಹಣೆಗೆ ಕೆಂಪು ತಿಲಕ ಇಡುತ್ತಾನೆ. ಅಗಲ ಚೊಣ್ಣ ತೊಡುತ್ತಾನೆ. ಅಂತೂ ತನ್ನ ಅಂತಸ್ತಿಗೆ ತಕ್ಕ ಪೋಷಾಕುಗಾರ. ಸ್ನಾನ ಇತ್ಯಾದಿಗಳನ್ನು ಒಂದೊಂದು ವೇಳೆ ಇವರ ಮನೆಯಲ್ಲೇ ಮಾಡುತ್ತಾನೆ. ಇವನ ಅಂಗಡಿ—ಇವನು ಅದನ್ನು 'ಇಷ್ಟುಡಿಯೋ' ಎಂದು ಕರೆಯುತ್ತಾನೆ—ಅದು ಮಗ್ಗಲು ಮನೆಯ ಮಹಡಿಯ ಮೇಲೆ ಇದೆ. ಓಬಲಿಗೆ ನೂರು ರೂಪಾಯಿ ಸಂಬಳ ಬರುವ ಮೊದಲು ಆತ ಕೆ. ಪಿ. ನಾಯಿಡು ಅವರ ವರ್ಕ್‌ಷಾಪ್‌ನಲ್ಲಿ ದಿನಕ್ಕೆ ಹದಿನಾಲ್ಕು ಆಣೆ ಕೂಲಿ ಸಂಪಾದಿಸುತ್ತಿದ್ದ. ಏರ್‌ಕ್ರಾಫ್ಟ್‌ನಲ್ಲಿ ಕೆಲಸ ಸಿಕ್ಕಿದ್ದು ಪುಟ್ಟಶಾಮಿ ಸಾಹಸದಿಂದ ಅಂತೆ. ಆದರೆ ಓಬಲಿ ಈಗ ಅದನ್ನು ಹೇಳುವುದಿಲ್ಲ. ಅಂತೂ ಇಬ್ಬರೂ ಬಹಳ ಅನ್ಯೋನ್ಯವಾಗಿದ್ದಾರೆ. ಓಬಲಿ ಹೆಂಡತಿ ಇವನನ್ನು

ಪ್ರಕಟವಾಗಿ ಕರೆಯಬೇಕಾದರೆ ' ಪುಟ್ಟಶಾಮಣ್ಣ' 'ನಮ್ಮ ಪುಟ್ಟಶಾಮಣ್ಣ' ಎಂದು ಹೇಳುತ್ತಾಳೆ. ಅಂತೂ ಈ ದಂಪತಿಗಳ ಜೀವನ ಪಥ ಸುಗಮವಾಗಿ ಸಾಗುತ್ತಿದೆ.

ಮಗ್ಗಲು ಮನೆ ಪುಟ್ಟಬಸಪ್ಪ ಬಲು ಹುಷಾರ್ ಪೈಕಿ. ಏನೊ ಅವನಿಗೆ ಈಚೆಗೆ ಇವರ ಒಡನಾಟ ಅಷ್ಟಾಗಿ ಸೇರುವುದಿಲ್ಲ. ಅವನೊಂದು ಬೀಡಿ-ಬೆಂಕಿ ಪೆಟ್ಟಿಗೆ—ಸೋಡ ಅಂಗಡಿಯನ್ನು ಇವರ ಮನೆಗೆ ಎದುರಾಗಿ ಇಟ್ಟುಕೊಂಡು ಸದಾ ಕೂತಿರುತ್ತಾನೆ. ಬಂದ ಗಿರಾಕಿಗಳೊಂದಿಗೆ ಆ ಮಾತು ಈ ಮಾತು ಆಡುತ್ತಿರುತ್ತಾನೆ. ಗಿರಾಕಿಗಳಿಲ್ಲದ ವೇಳೆ ತನ್ನ ಸುತ್ತುಮುತ್ತಣ ಪ್ರಪಂಚ ನಿರೀಕ್ಷಿಸುತ್ತಿರುತ್ತಾನೆ. ಇವರ ಮನೆ ಹೆಂಗಸರು ಅವರ ಮನೆಗೆ ಹೋಗುವುದಿಲ್ಲ; ಅವರ ಮನೆಯವರು ಇವರ ಮನೆಗೆ ಬರುವುದಿಲ್ಲ. ಏನಾದರೂ ಹಬ್ಬ, ವಿಶೇಷಗಳಲ್ಲಿ ಒಬ್ಬರ ಮನೆಗೊಬ್ಬರು ಅರಿಶಿನ ಕುಂಕುಮಕ್ಕೆ ಹೋದರೆ ಅದೇ ಹೆಚ್ಚು.

ರಂಗಮ್ಮ (ಓಬಲಪ್ಪನ ಹೆಂಡತಿ) ತನ್ನ ಕೆಲಸ ತೀರಿಸಿಕೊಂಡು ಮಗುವನ್ನೆತ್ತಿಕೊಂಡು ಕಿಲಾರಿ ರಸ್ತೆಗೆ ಹೋಗುತ್ತಾಳೆ. ಹಗಲು ಹೊತ್ತಿನೆಲ್ಲೆಲ್ಲ ಓಬಲಿಗೆ ಫ್ಯಾಕ್ಟರಿಯಲ್ಲಿ ಕೆಲಸ; ಸಂಜೆಗೇ ಅವನು ಬರುವುದು. ಇವಳು ಅಷ್ಟರಲ್ಲಿ ಮನೆಗೆ ಬಂದು ಅಡಿಗೆಮಾಡಿ ಕಾದಿರುತ್ತಾಳೆ. ದಿನವೂ ಹೀಗೆ ನಡೆಯುತ್ತಿತ್ತು. ರಜಾದಿವಸ ಬಂದರೆ ಆಗಾಗ್ಗೆ ಸಿನಿಮಾಕ್ಕೂ ಹೋಗುವುದುಂಟು. ಅವನು ಅವತ್ತು ಇಸ್ತ್ರಿ ಮಾಡಿದ ಕೋಟು, ಷರಾಯಿ ಹಾಕಿಕೊಂಡು ಮಗುವನ್ನೆತ್ತಿಕೊಳ್ಳುತ್ತಿದ್ದ. ಈಕೆ ಪ್ರಿಂಟ್ ಸೀರೆ ಉಟ್ಟುಕೊಂಡು ತೋಳುಮೇಲಕ್ಕೆ, ಕೊರಳು ಪಟ್ಟಿ ಕೆಳಕ್ಕೆ ಇರುವ ರವಿಕೆ ತೊಟ್ಟು, ಎಡಗಡೆ ಸೆರಗು ಭುಜದಮೇಲೆ ಹಾಕಿ, ರವಿಕೆ ಹೆಚ್ಚು ಕಾಣಿಸುವಂತೆ ಬಲಸೆರಗು ಕೆಳಗೆ ಬಿಟ್ಟು ಎಲೆ ಅಡಕೆ ಮೆಲ್ಲುತ್ತ ಹಿಂಬಾಲಿಸುವಳು. ಒಂದೊಂದು ವೇಳೆ ಪುಟ್ಟಶಾಮಿ, ಜೊತೆಗೆ ಬರುತ್ತಿದ್ದ. ಅವನೆ ಒಂದೊಂದು ದಿನ ಎಲ್ಲರ ಟಿಕೆಟ್ ಕೊಂಡುಕೊಳ್ಳುತ್ತಿದ್ದುದೂ ಉಂಟು. ಆಗ, ಇವಳು, "ಏನ್ರಣ್ಣ ನೀವು! ನಾವು ನಿಮ್ಮನ್ನು ಕರಕೊಂಡು ಬಂದು ನಿಮ್ಮಿಂದ ಟಿಕೆಟ್ ತೆಗೆಸೋದೆ?" ಎನ್ನುವಳು.

ಗಂಡನಿಗೆ, "ಏನ್ರೀ ನೀವು, ಅಣ್ಣನ ದುಡ್ಡನ್ನೆ ಖರ್ಚುಮಾಡಿಸುತ್ತೀರಿ?" ಎನ್ನುವಳು.

ಅನ್ಯೋನ್ಯವಾಗಿ ಒಂದು ಸಂಸಾರದವರಂತೆ ಇದ್ದಾರೆ ಎಂದು ಎಲ್ಲರಿಗೂ ಗೊತ್ತಾಗುವುದು.

ಒಂದು ದಿನ ಸಂಜೆ ಏಳುಗಂಟೆಗೆ ಪುಟ್ಟಬಸಪ್ಪ ವೀಳೆಯದೆಲೆಗೆ ನೀರು ಹಾಕಿಡಬೇಕೆಂದು ತಮ್ಮ ಮನೆಗೆ ಹೋದ. ಮನೆಯವರು ಸಿನಿಮಾಕ್ಕೊ ಎಲ್ಲಿಗೊ ಹೋಗಿದ್ದರು. ರಾತ್ರಿ ಹಾಗೇ ಇಟ್ಟರೆ ಒಣಗುವುವು; ರಂಗಮ್ಮನ ಮನೆಯಿಂದಲಾದರೂ ನೀರು ತರೋಣ, ಎಂದು ಅವರ ಮನೆಗೆ ಹೋಗಿ ಕದ ತಟ್ಟಿದ. ಬಾಗಿಲು ತೆರೆದದ್ದು ರಂಗಮ್ಮ ಅಲ್ಲ, ಪುಟ್ಟಶಾಮಿ !

ಪುಟ್ಟಶಾಮಿ ಸ್ವಲ್ಪ ಬೆಚ್ಚಿದ. ಪುಟ್ಟಬಸಪ್ಪ "ಯಾಕ್ರಿ ಹೆದರಿದ್ರೇನ್ರೀ? ವೀಳೆದೆಲೆಗೆ ನೀರು ಬೇಕಿತ್ತು; ನಮ್ಮ ಮನೇಲಿ ಬೀಗ ಹಾಕ್ಕೊಂಡು ಹೋಗವ್ರೆ-ಅದ್ಕೆ ಬಂದೆ. ಓಬಲಪ್ಪ ಬಂದವರೊ?'' ಎಂದು ಕೇಳಿದ. ಪುಟ್ಟಶಾಮಿ ಉತ್ತರ ಸ್ಪಷ್ಟವಾಗಿರಲಿಲ್ಲ ''ಇಲ್ಲ, ಬಂದ ಹಾಗೆ ಕಾಣಲಿಲ್ಲ'' ಎಂದು ಹೇಳಿದ ಹಾಗಿತ್ತು.

'' ರಂಗಮ್ಮ ! ಕೊಂಚ ನೀರುಕೊಡು ತಾಯಿ '' ಎನ್ನುತ್ತ ಪುಟ್ಟಬಸಪ್ಪ ಒಳಕ್ಕೆ ಹೋದ. ರಂಗಮ್ಮ ಮಾತನಾಡಲಿಲ್ಲ. ಇವನು ಹೊರಗೆ ನಿಂತಿದ್ದ. ರಂಗಮ್ಮ ಕೊಂಚ ಹೊತ್ತಿನ ಮೇಲೆ ಬಂದು ಕೇಳುತ್ತಾಳೆ: '' ಏನ್ರಣ್ಣ ? ಯಾತಕ್ಕೆ ನೀರು? ಮಗ ಸೀರೆ ಮೇಲೆ ಇಸ್ಸಿಮಾಡಿತು; ಬಿಚ್ಚಿ ಬೇರೆ ಉಟ್ಕೊಂಡು ಬರೋದು ಹೊತ್ತಾಯಿತು. ಇನ್ನೂ ಗಂಟು ಕಟ್ಟಿಕೊಂಡಿಲ್ಲ. ಅಷ್ಟರಲ್ಲೇ ನೀವು ಬಂದ್ರಿ.''

"ವೀಳೆದೆಲೆಗೆ ನೀರು ಬೇಕಿತ್ತು.. ಕೇಳಿ ತಗೊಂಡುಹೋಗೋಣ ಅಂತ ಬಂದೆ."

"ಕೊಳ್ಳಿರಣ್ಣ" ಎನ್ನುತ್ತ ಕೊಟ್ಟಳು.

ಪುಟ್ಟಬಸಪ್ಪ ಮನಸ್ಸಿನ ಮೇಲೆ ನಗೆ ಮೂಡಿಸಿಕೊಂಡು ಅಂಗಡಿಗೆ ಹೊರಟ. "ಯಾಕೆ ಹೊರಟ್ರಲ್ಲಣ್ಣ? ಬರ್ರಿ, ಕೂತ್ಕೊ ಬರ್ರಿ; ಅವರೂ ಬರೋ ಹೊತ್ತು." "ಅಂಗಡಿ ಬಿಟ್ಟು ಬಂದಿದೇನಮ್ಮ; ನಿಮ್ಮ ಯಜಮಾನ್ರು ಬರ್ತಾರಲ್ಲ ಈಗ" ಎಂದು ಹೇಳುತ್ತ ಹೊರಟುಬಂದ.

ಒಂದು ದಿವಸ ರಾತ್ರಿ ಪುಟ್ಟಬಸಪ್ಪ ಬೀಡಿ ಅಂಗಡಿ ಮುಚ್ಚಿಕೊಂಡು, ಊಟಮಾಡಿ ಆದಮೇಲೆ ಎಲೆ ಅಡಿಕೆ ಅಗಿಯುತ್ತ, ಸಿಗರೇಟು ಹಚ್ಚಿಕೊಂಡು ಅಂಗಡಿ ಜಗಲಿಮೇಲೆ ಕೂತಿದ್ದ. ರಾತ್ರಿ ಹೆಚ್ಚು ಹೊತ್ತಾದದ್ದರಿಂದ ಬೀದಿಯಲ್ಲಿ ಜನರು ಓಡಾಡುವುದು ಕಡಿಮೆ. ಎದುರು ಮನೆಬಾಗಿಲು-ಓಬಲಿ ಮನೆ ತೆರೆದಿದೆ. ಒಳಗೆ ಓಣಿಯಲ್ಲಿ, ಒಬ್ಬ ಹೆಂಗಸು ನಿಂತು ಒಂದೇ ಸಮನೆ ತಾರಾಟಿಗೆ ತೆಗೆದುಕೊಂಡಿದ್ದಾಳೆ ಓಬಲಿ ಹೆಂಡತಿ ರಂಗಮ್ಮನನ್ನು.

ಇವಳು ಆ ಹೆಂಗಸಿನ ಮನೆಗೆ ಆಗಾಗ್ಗೆ ಹೋಗಿಬರುತ್ತಿದ್ದಳಂತೆ. ಇಬ್ಬರಿಗೂ ಸಲಿಗೆ. ಆ ಸಲಿಗೆ ಅಷ್ಟಕ್ಕೆ ನಿಂತಿರದೆ ಆ ಹೆಂಗಸಿನ ಗಂಡನೊಂದಿಗೂ ಹೆಚ್ಚಾಯಿತಂತೆ. ಈಕೆಯೊಬ್ಬಳು ಹೊಸತಾಗಿ ಬಂದಳಲ್ಲ ಎಂದು ಆ ಹೆಂಗಸಿಗೆ ಆಕ್ರೋಶ. ಅದು ವಿಪರೀತಕ್ಕೆ ಬಂದು, ಹೇಳಿ ನೋಡಿಯೂ ಉಪಯೋಗವಾಗದ ಪ್ರಯುಕ್ತ ಇವಳಗಂಡ ಓಬಲಪ್ಪನೊಂದಿಗೆ ಫಿರ್ಯಾದು ಮಾಡಲು ಬಂದಿದ್ದಾಳೆ ಬೇರೆ ಹೆಂಗಸರ ಗಂಡಂದಿರ ಜೊತೆಗೆ ಇವಳದೇನು ಕೆಲಸ? ಇದೇ ಆ ಗಲಾಟೆಯಿಂದ ತಿಳಿದ ಅಂಶ. ಅವಳು ಅಸಾಧ್ಯ ಹೆಣ್ಣು; ಬೀದಿಯಲ್ಲಿ ಎಲ್ಲರಿಗೂ ಕೇಳುವಂತೆ ನಡೆಸಿದ್ದಾಳೆ ಈ ವಿಲಾಸದ ರಾದ್ಧಾಂತವನ್ನು ಭಯಂಕರ ರೀತಿಯಿಂದ. ಬಹಳ ಹೀನಭಾಷೆಯಲ್ಲಿ ತನ್ನ ಫಿರ್ಯಾದನ್ನು ಮುಂದುವರಿಸಿದ್ದಾಳೆ. ಈ ಪಂಚಾಯಿತಿಯಲ್ಲಿ ಪುಟ್ಟಶಾಮಿ, ಈ ಹೆಂಗಸು (ಅವನ ಅಕ್ಕ), ಓಬಲಿ, ರಂಗಮ್ಮ ಈ ನಾಲ್ಕು ಜನ.

ಗಂಡ ಈ ಸನ್ನಿವೇಶದಲ್ಲಿ ಬೆಪ್ಪನಾಗಿದ್ದಾನೆ. ತಾನು ಬದುಕಿದ್ದೇನೆಯೊ ಸತ್ತಿದ್ದೇನೆಯೊ ಎಂಬ ಅರಿವಿಲ್ಲ.

"ಯಾಕೆ ಬಂದಿದ್ದೆ ಇವತ್ತು ಮಧ್ಯಾಹ್ನ ?" ಕೇಳುತ್ತಾಳೆ ಪುಟ್ಟಶಾಮಿ ಅಕ್ಕ. "ಲೋಟ ಕೊಡಬೇಕಾಗಿತ್ತು; ಬಂದಿದ್ದೆ"—ರಂಗಮ್ಮನಿಗೆ ಇದೊಂದು ಕಾಲಿಗೆ ತಗಲುವ ಹುಲ್ಲು ಮುಳ್ಳಿನಂತೆ.

"ನೀನಲ್ಲಿಗೆ ಇನ್ನೊಂದು ಸಾರಿ ಬಾ, ಪಾಪಾಸಿನಿಂದ ಹೊಡೀತೀನಿ."

"ನಿನ್ನ ಕಂಡಿದಿನಿ ಬಿಡೆ! ಇವಳ ಉತ್ತರ."

ಮುಂದೆ ಏನೇನೊ ಮಾತುಗಳಾಯಿತು. ಪುಟ್ಟಸಬಪ್ಪ ನಾಲ್ಕಾರು ಜನ ಕೂಡಿಕೊಂಡು ನೋಡುತ್ತಲೇ ಇದ್ದ. ಪುಟ್ಟಶಾಮಿ, ಅಕ್ಕನನ್ನು ಕರೆದು ಕೊಂಡು ಪಿಸುಮಾತಿನಲ್ಲಿ ಹೇಳುತ್ತ ಸಮಾಧಾನ ಪಡಿಸುತ್ತಿದ್ದ.

ಇದು ಗಂಡು, ಓಬಲಿ, ದೊಡ್ಡ ಸಂಬಂಧ ಇದೆ ಎಂದು ಹೇಳಿಕೊಳ್ಳು ತ್ತಿದ್ದುದು ಅಳುತ್ತಿತ್ತು; ಗೊಳೋ ಎನ್ನುತ್ತಿತ್ತು.

ಅದು, ಆ ಹೆಣ್ಣು, ಅದೂ ನಿಂತಿತ್ತು; ಅದಕ್ಕೇನು ಎನ್ನಿಸಬೇಕು ಮನಸ್ಸಿಗೆ ?

ಪುಟ್ಟಶಾಮಿ ಅಕ್ಕನನ್ನು ಕಳಿಸಿ, ಇವನ ಬಳಿಗೆ ಬಂದು ಸಮಾಧಾನ ಹೇಳುತ್ತಾನೆ.

ಇದು, "ಪುಟ್ಟಶಾಮಣ್ಣ! ನೀನು ನನಗೆ ಅಣ್ಣನ ಸಮ; ನಾನು ಮಾನ ದಿಂದ ಬಾಳಬೇಕು ಅಂತ ಎಷ್ಟು ಮಾಡಿದೆ; ಹೆಣ್ಣಿನಿಂದಾನೆ ಮಾನ. ಅದೇ ಇಲ್ಲದಿದ್ದ ಮೇಲೆ ಇನ್ನೇನು?" ಎಂದು ಅಳುತ್ತದೆ ತಲೆತಗ್ಗಿಸಿಕೊಂಡು.

ಪುಟ್ಟಶಾಮಿ ರಂಗಮ್ಮ ಪರಸ್ಪರ ನೋಡಿದರು. ಪುಟ್ಟಶಾಮಿ ಓಬಲಿಯ ಹತ್ತಿರ ಬಂದು ಅವನ ಬೆನ್ನಮೇಲೆ ಕೈಯಿಟ್ಟು "ಆದದ್ದು ಆಗಿಹೋಯಿತು. ಏನು ಮಾಡೋಹಂಗೈತೆ ?" ಎಂದನು.

ಬೊಂಬೆ ಒಡೆದುಕೊಂಡ ಮಗುವಿನಂತೆ, ತನ್ನ ಮಾನದ ಬೊಂಬೆ ಒಡೆದುದಕ್ಕಾಗಿ ಈ ಗಂಡು ತಲೆಯ ಮೇಲೆ ಕೈಹೊತ್ತುಕೊಂಡು ಮಗುವಿನಂತೆ

ಕಣ್ಣೀರು ಕರೆಯುತ್ತಿತ್ತು. ಆಗ, ರಂಗಮ್ಮನ ಮಗು, ತಪ್ಪು ಹೆಜ್ಜೆಗಳನ್ನಿಕ್ಕುತ್ತ ಬಂದು ಇವನ ಮುಖವನ್ನು ಚಿಗುರು ಕೈಗಳಿಂದ ತಟ್ಟುತ್ತ, "ಅಪ್ಪ!" "ಅಪ್ಪ!" ಎಂದು ತೊದಲಿಸಿತು.

ಪುಟ್ಟಬಸಪ್ಪ, "ಏನದು? ಏನಾಯಿತು? ಯಾಕೆ ಓಬಲಪ್ಪ?" ಎನ್ನುತ್ತ ಬಂದನು.

ಪುಟ್ಟಶಾಮಿ, "ಏನಿಲ್ಲಣ್ಣ, ಸಂಸಾರದಲ್ಲಿ ಗಂಡ ಹೆಂಡರಿಗೆ ಬರೋ ಜಗಳ; ಇಬ್ಬರೂ ವಾದಿ ಆಡಿದ್ರು"; ಆ ಹೆಂಗಸಿನ ಕಡೆ ತಿರುಗಿ "ಹೋಗತ್ತಿಗೆ ನೀನು ಒಳಗೆ!" "ಓಬಲಪ್ಪ! ಸುಮ್ಮನಿರು" ಎಂದು ಸಮಾಧಾನ ಹೇಳಿ ಮಗುವನ್ನೆತ್ತಿಕೊಂಡ.

ಮಾನವಂತನ ಮಾನವನ್ನು ಮಾನವಂತನ ಹೆಂಡತಿ ಕಳೆದಳು; ಹೆಂಡತಿಯು ಗೆಣೆಯು "ಅತ್ತಿಗೆ" ಮಾನವನ್ನು ಉಳಿಸುವ ಯತ್ನ ಮಾಡಿದ. ಬೀಡಿ ಅಂಗಡಿ ಬಸಪ್ಪ ಈ ನಾಟಕ ತೋರಿಸುತ್ತಿದ್ದ ಜನಗಳಿಗೆ.

12-11-44—14-11-44.

# ನಾರಿ

ಈಸೂರು ಎಂಬ ಊರು ಇತಿಹಾಸ ಪ್ರಸಿದ್ಧವಾಗಿ ಹೋಗಿದೆ. ಅಮಾನುಷ ರೀತಿಯಿಂದ ಅಧಿಕಾರಿಗಳಿಬ್ಬರ ಕೊಲೆಯನ್ನು ತಿಳಿಗೇಡಿ ಜನ ನಡೆಸಿದರು. ಸರ್ಕಾರ ಅದಕ್ಕೆ ತಕ್ಕ ಪ್ರತೀಕಾರ ಮಾಡಿತು.

ಈಗ ಹೇಳುವ ಕಥೆ ಇದಕ್ಕೆ ಸಂಬಂಧಿಸಿದುದಲ್ಲ. ಆದರೆ ಇದೇ ದುರ್ದೈವಿ ಊರಿನಲ್ಲಿ ಅದಕ್ಕೆ ಹತ್ತು ಹನ್ನೆರಡು ವರ್ಷ ಪೂರ್ವದಲ್ಲಿ ನಡೆದ ಕಥೆ.

ಆ ಊರು ಜನವಸತಿಯಿಂದ, ಫಸಲು-ಫಲಸಂಪತ್ತಿಯಿಂದ, ಧನಾಢ್ಯತೆಯಿಂದ ಆ ಇಡೀ ಗಡಿವಾಡ (ಮಲೆನಾಡು ಮೈದಾನ ಕೂಡುವ ನಾಡು) ಪ್ರಾಂತಕ್ಕೆ ಒಂದು ಮುತ್ತಿನ ಮಣಿಯಾಗಿತ್ತು.

ಒಂದು ದಿನ–ಬೇಸಗೆಯ ಒಂದು ದಿನ, ಆ ಊರ ಮೇಲೆ ದೈವದ ಕ್ರೂರಗತಿ ತೀವ್ರವಾಗಿ ಕವಿದುಬರಲು ಕೆಲವೇ ಗಂಟೆಗಳ ಕಾಲದಲ್ಲಿ ಇಡೀ ಊರು ಭಸ್ಮೀಭೂತವಾಗಿ ಹೋಯಿತು! ಜನಗಳು ಕಾರಣವನ್ನು ಏನೇನೊ ಹೇಳಿಕೊಂಡರು. ಆ ಊರ ದೇವಾಲಯದ ವೀರಭದ್ರನಿಗೆ ಅತ್ಯಾಚಾರವಾಯಿತೆಂದೂ, ಆದ್ದರಿಂದ ಆ ಊರಿನ ಮೇಲೆ ಭಯಂಕರ ರೀತಿಯಿಂದ ಸೇಡನ್ನು ತೀರಿಸಿದನೆಂದೂ ಹೇಳಿದರು.

ಆಗ ರೆವಿನ್ಯೂ ಕಮಿಷನರ್ ಆಗಿದ್ದ ಒಬ್ಬ ಕ್ರಿಶ್ಚಿಯನ್ ದೊಡ್ಡ ಮನುಷ್ಯರು ಬೆಂದ ಊರನ್ನು ನೋಡಿ, ದುಃಖದಿಂದ "ಇದು ವೀರಭದ್ರನ ಪ್ರಕಟಕೋಪವೇ!" ಎಂದು ಕವಿತಾಧೋರಣೆಯಲ್ಲಿ ಹೇಳಿದರು. ಸೋಜಿಗವಿದು: ಊರೆಲ್ಲ–ಮನೆಗಳೆಲ್ಲ ಬೆಂಕಿ ಮುದ್ದೆಯಾಗಿ, ಕೆಂಡದ ರಾಶಿಯಾಗಿ,

ಬೂದಿಯ ಗುಡ್ಡೆಗಳಾಗಿ ಹೋಗಿದ್ದರೂ ಊರ ಮಧ್ಯೆ ಮರ, ಬಿದಿರು, ಬೊಂಬು, ಹೆಂಚು, ಇವುಗಳನ್ನುಳ್ಳ ಆ ದೇವಾಲಯ ಏನೂ ಆಗಿರಲಿಲ್ಲ. ಕಾರಣವೇನೊ ಇದ್ದೀತು ಅದು ಸುಡದಿರಲು. ಆದರೆ ಭಾವುಕರಿಗೆ ಅದೊಂದು ಮಹಾತ್ಮ್ಯೆ.

ಆ ಪ್ರಳಯ ಜ್ವಾಲೆಯಲ್ಲಿ ಬೆಂದು ಸತ್ತವರು ಒಂದು ನೂರರ ಮೇಲೆ. ಸಾವಿರಾರು ದನಕರುಗಳು, ಕೋಳಿ, ನಾಯಿ, ಬೆಕ್ಕುಗಳು, ಗಿಡದ ಮೇಲೆ ಕುಳಿತಿದ್ದ ಹಕ್ಕಿ ಪಕ್ಷಿಗಳು ಉರಿದು, ಬೆಂದು, ಇದ್ದಿಲಾಗಿ ಹೋದವು. ರುದ್ರನ ಪ್ರಳಯ ತಾಂಡವ ಅಷ್ಟು ಪ್ರಚಂಡವಾಗಿತ್ತು !

ಮಧ್ಯಾಹ್ನದ ಹೊತ್ತು ಊಟಕ್ಕೆಲ್ಲರೂ ಹೊಲಗದ್ದೆಗಳಿಂದ ಬಂದು ಕುಳಿತಾಗ–ಎಲ್ಲಿಂದ ಬಂದಿತೊ? ಮೃತ್ಯುಜ್ವಾಲೆ ಮುತ್ತಿ, ಸುತ್ತುವರಿದು, ತಪ್ಪಿಸಿಕೊಳ್ಳಲು ಅನುವು ಕೂಡದೆ ತನ್ನ ಲೀಲೆಯನ್ನಾಡಿತು.

ಕೆಲತಿಂಗಳ ನಂತರ ಆ ಊರಿಗೆ ಹೋಗಿದ್ದಾಗ, ಆಗಲೂ ಅದೊಂದು ಶ್ಮಶಾನ ಭೂಮಿ. ಈಗ ನಡೆಯುತ್ತಿರುವ ಯುದ್ಧರಂಗದಂತೆ ಶೂನ್ಯವಾಗಿ, ಸುಟ್ಟು ನಾಶಹೊಂದಿತ್ತು. ಸುಟ್ಟುಹೋದ ದವಸ, ಬೆಂದು ಹೋದ ಮನೆ-ಮರ ಮುಟ್ಟುಗಳು, ಕರಗಿ ಕಿಟ್ಟವಾದ ನಗ ನಾಣ್ಯಗಳು, ಬೂದಿಯಾದ ಕಾಗದದ ದುಡ್ಡು, ಕಮರಿ ಕಪ್ಪೊಡೆದ ಮೋಟು ಗೋಡೆಗಳು ಇವೇ ಆಗ ಆ ಊರಿನ ಭಾಗ್ಯ.

ಆದಾರುಣ ನೋಟವೂ ಕಾಲ ಕಳೆದಂತೆ ಮನಸ್ಸಿನಿಂದ ಅಳಿಸಿ ಹೋಯಿತು. ಆದರೆ ಮನಸ್ಸಿನಲ್ಲಿ ಮಾಸದೆ ಮೂಡಿರುವ ಅಂಶ ಇನ್ನೊಂದು.

ಘೋರ ವಿಪತ್ತಿನಲ್ಲಿ ಮನುಷ್ಯನು ತನ್ನ ದೈವತ್ವವನ್ನೂ ಪ್ರಕಾಶಿಸಬಲ್ಲ. ದಾರುಣ ಸನ್ನಿವೇಶದ ಮಧ್ಯೆ ತ್ಯಾಗ, ಸ್ಥೈರ್ಯ ಇತ್ಯಾದಿ ಗುಣಗಳನ್ನು ಪ್ರದರ್ಶಿಸಬಲ್ಲ. ಇವೇ ಮನುಷ್ಯನ ಬಾಳಿನ ಬಗ್ಗೆ ಭರವಸೆ ನೀಡುವುವಾಗಿವೆ.

ಕಳೆದುಳಿದ ಜನರು ಸುತ್ತಲೂ ಚೆದರಿ ಹೋದರು. ಇನ್ನೊಂದು ಹತ್ತಿರದ ಹಳ್ಳಿಯಲ್ಲಿ ಆ ಊರ ಗೌಡರ ಮನೆಯ ಶಾಖೆ (ಅದೊಂದು ದೊಡ್ಡ ವಂಶ) ನೆಲೆಸಿತ್ತು. ಅವರು ಲಿಂಗವಂತರು. ಆ ಮನೆಯಲ್ಲಿ ಇಬ್ಬರು ಹುಡುಗಿಯರು: ಒಬ್ಬಳು ಹನ್ನೆರಡು ವರ್ಷದವಳು, ಇನ್ನೊಬ್ಬಳು ಹತ್ತು ವರ್ಷದವಳು. ಅವರೀಗ ದೊಡ್ಡವರಾಗಿ ಎಲ್ಲಿಯೊ ಇರಬಹುದು. ಅದು ನಮಗೆ ಪ್ರಕೃತವಲ್ಲ. ಆ ಹುಡುಗಿಯರು ಸಕಲ ವಿಧದಲ್ಲಿಯೂ ಚೆಲುವೆಯರು–ಮುಖದ ಅಂದ, ಮೈ ಇರುವು ಎಲ್ಲದರಲ್ಲಿಯೂ. ಆದರೆ ಒಬ್ಬಳಿಗೆ ಕೈ-ಮೊಣಕೈ ಮಡಿಸಲಾಗದಂತೆ ಹಿಡಿದುಕೊಂಡು ಗಾಯದ ಕಲೆಯಿಂದ ವಿಕೃತವಾಗಿದೆ. ಇನ್ನೊಬ್ಬಳಿಗೆ ಕೆನ್ನೆ ಹಣೆ, ಬೆರಳುಗಳ ಮೇಲೆ ಹೋಗಲಾಗದ ಗಾಯ. ಬೆರಳುಗಳು ಊನ.

ಈ ಮಕ್ಕಳನ್ನು ನೋಡಿ ನನಗೆ ಮರುಕ. ದೈವ ಏನನ್ಯಾಯ ಮಾಡಿತಲ್ಲ! ರೂಪ ಕೊಟ್ಟೂ ಇಲ್ಲದಂತೆ ಮಾಡಿತಲ್ಲ! ಆ ಹುಡುಗರಿಗೆ ಅದೊಂದೂ ಯೋಚನೆಯಿಲ್ಲ. ಆಡಿಕೊಂಡು, ಹಾಡಿಕೊಂಡು, ಕಂಬ ಸುತ್ತುವ ಆಟ, ಕಣ್ಣು ಮುಚ್ಚುವ ಆಟ ಇದರಲ್ಲಿಯೇ ಇದ್ದವು.

ಮನೆ ಹಿರಿಯನನ್ನು ಕೇಳಿದೆ–"ಏತಕ್ಕೆ ಹೀಗಾಯಿತು?"

"ಇದು ಈಸೂರು ಬೆಂಕಿಯಲ್ಲಿ ಆದದ್ದು. ಇವು ಬದುಕಿದ್ದೇ ಪರಾಕಷ್ಟ. ಅಲ್ಲಿ ಆದವು ಈ ಗಾಯ."

"ಇವರು ಬದುಕಿದ್ದು ಹೇಗೆ?"

ಆತ ಹೇಳತೊಡಗಿದ :

"ನೋಡ್ರೀ, ಅವತ್ತು ಮಧ್ಯಾಹ್ನ. ಗಂಡಾಳು ಹೆಣ್ಣಾಳು ಎಲ್ಲ ಗದ್ದೆ ಕೆಲಸ ತೀರಿಸಿಕೊಂಡು ಬಂದಿದ್ರು. ಊಟದ ಸಮಯ. ಎಲ್ಲರ ಮನೆಯಲ್ಲೂ ಮೈ ತೊಳೀತಾನೊ, ಇಲ್ಲ ಊಟ ಮಾಡ್ತನೊ ಇತ್ತು ಜನ. ದನಕರು ಎಲ್ಲ-ಬಿಸಲು, ಹೊರಗೆ ಮೇವಿಲ್ಲ ಅಂತ ಮನೆ ಒಳಗೆ ಕಟ್ಟಿದ್ರು. ಅದೆಲ್ಲೊ–ಯಾರ

ಮನೆಯಲ್ಲೊ ಬಿತ್ತು ಬೆಂಕಿ. ಇದುತನಕ ಎಲ್ಲಿಂದ ಸುರು ಆಯಿತು ಅನ್ನೋದೆ ತಿಳಿದಿಲ್ಲ. ಒಂದೇ ಸಾರಿ, ಭುಗ್ ! ಅಂತ ಚಿಮಣಿ ಎಣ್ಣೆ ಡಬ್ಬಾಕ್ಕೆ ಬೆಂಕಿ ಬಿದ್ದು ಎದ್ದಹಾಗ ಆಯಿತು. ಆ ಹೊತ್ತಿನಲ್ಲಿ ಬೇರೆ ಸುಂಟರಗಾಳಿ ಸುರ್ ಅಂತ ಎದ್ದು ಈ ಬೆಂಕಿ ಕೂಡಿತು. ಇನ್ನು ಕೇಳಬೇಕೆ ಅಗ್ನಿ ಲೀಲಾ? ಊರು, ಕೇರಿ, ಓಣಿ, ಮನೆ, ಸಂದಿ ಎಲ್ಲ ಸುತ್ತಿ ಸುತ್ತಿ ಮನೆ ನಾಶ ಮಾಡ್ತು. ಹಿಂದಿನ ಕಾಲಕ್ಕೆ ಶತ್ರುಗಳು ಊರು ನುಗ್ಗಿದ್ರೆ ಮನೆ ಮನೆನುಗ್ಗಿ, ಹ್ಯಾಗ ಮಕ್ಕಳೂ ಮರಿ ಒಂದೂ ಬಿಡ್ದೆ, ಕೊಚ್ಚಿ ಕೊಂದು ಇದ್ದ ಬದ್ದದ್ದನ್ನೆಲ್ಲ ಸೂರಿಮಾಡಿ ಒಯ್ತಿದ್ರೊ, ಹಾಗೆ ಒಯ್ತು ಈ ಅಗ್ನಿ ಯಮ ಲೋಕಕ್ಕೆ.

''ನಮ್ಮ ಗೌಡ್ರು ಬೆಂಗಳೂರು, ಪುಣೆ, ಮದ್ರಾಸ್, ಮುಂಬಯ್– ಇವನ್ನೆಲ್ಲ ನೋಡಿಕೊಂಡು ಬಂದು ಮನೆ ಕಟ್ಟಿಸುತ್ತಿದ್ರು. ಎಲ್ಲ ಮುಗಿದಿತ್ತು. ಅದೇ ಮನೆ ಒಳಗೆ ವಾಸಾನೂ ಇದ್ರು. ಬೆಂಕಿ ಮನೆ ಮನೆ ಸುತ್ತಿ, ಓಣಿ ಓಣಿ ಸುತ್ತಿ ಆವರಿಸೋದಕ್ಕೆ ಹತ್ತೋತ್ಲು, ಜನ–ಈ ಗೌಡ್ರ ಮನೆ ದೊಡ್ಡದು. ಅದಕ್ಕೆ ಎರಡು ಕಡೆಗೂ ಓಣಿ ಅದೆ, ಅಲ್ಲಿಗೆ ಬೆಂಕಿ ನುಗ್ಗಲಾರದು–ಬೀಳ ಲಾರದು ಅಂತ ಮಾಡಿದ್ರು. ಹಾಗೆ ನಂಬಿ ಜನ ಓಡೋಡಿ ಬಂದು ಸೇರಿದ್ರು ಅಟ್ಟದ ಮೇಲೆ, ಹಿತ್ತಲಲ್ಲಿ, ನಡುಮನೆಯಲ್ಲಿ, ಅಡಿಗೆ ಮನೇಲಿ, ಎಲ್ಲಾ ಕಡೆ. ಆ ಕೊಲಿ, ಆ ಶಬ್ದ, ಅದು ಹೇಳೋ ಹಾಗಿಲ್ಲ. ಮೃತ್ಯು ಊರನ್ನೇ ಸುಡೋ ವಾಗ ಈ ಮನೆ ಬಿಟ್ಟೀತೆ? ಬಿತ್ತು ಉರಿ! ಎದ್ದಿತು ಉರಿ! ಹಂಚು ಪಡಪಡ ಸಿಡಿದವು. ತೊಲೆ, ಮುಂಡಗಿ, ಕದ, ಚೌಕಟ್ಟು ಎಲ್ಲ ಭಗ! ಭಗ! ನಿಗಿ! ನಿಗಿ! ಉರೀತಾ ನಿಂತ್ವು. ಏನು ಹೇಳೋದು? ಅದೊಂದು ಆಟ ಮೃತ್ಯುವಿಗೆ!

"ಜನ ಮತ್ತೆ ಹೊರಕ್ಕೆ ಬಿದ್ದರು. ಕೆಲವರಿಗೆ ಬೆಂಕಿ ಹತ್ತಿತು. ಕೆಲವರು ಸುಟ್ಟರು. ಕೆಲವರು ಬೆಂದರು. ಕೆಲವರು ಸತ್ತರು. ಜನ ಕೆಲವರು ಅದರಲ್ಲೆ ತಪ್ಪಿಸಿಕೊಂಡರು................"

"ಬೆಂಕಿ ಆರಿಸಲಿಕ್ಕೇನೂ ಪ್ರಯತ್ನ ಮಾಡಲಿಲ್ಲವೇ ಜನ?" ಎಂದು ಕೇಳಿದೆ.

"ಹ್ಯಾಗ ಮಾಡ್ತಾರೆ? ಒಂದು ಮನೀನೆ? ಎರಡೇ? ಇಡೀ ಊರೆಲ್ಲ ಸುಟ್ಟು ಬೇಯ್ತಾ ಅದೆ. ಆ ಬೆಂಕಿ ಜ್ವಾಲೆ ಒಳಗೆ ನುಗ್ಗಿ ಮನೇಲಿದ್ದ ದನ, ಕರ, ದಾಗೀನ, ಕಾಗ್ದಪತ್ರ ಸಹ ಹೊರಗೆ ಹಾಕಲಿಕ್ಕೆ ಇವ್ರಿಗೆ ಅವಕಾಶ ಆಗಲಿಲ್ಲ. ಎಲ್ಲ ಇಡೀ ಏಕ ಒಂದೇ ಜ್ವಾಲೆ. ದನದ ಕೊರಳ ಹಗ್ಗ ಬಿಚ್ಕೋಳ್ಕ ಹೋದವ್ರಲ್ಲೇ ಎಷ್ಟೋ ಜನ ಸತ್ತರು. ಹಸುಗೂಸುಗಳ ತೊಟ್ಲ ಬಿಚ್ಚಿ ಹೊರಕ್ಕ ತರೋದ್ರಲ್ಲೇ ಎಷ್ಟೋ ಹೆಣ್ಣುಮಕ್ಕಳು ಸತ್ತರು. ಇನ್ನು ಒಡವೆ ಏನು ತಂದಾರು? ದವಸ ಏನು ಉಳಿಸ್ಯಾರು? ಯಾರ ಮನೆ ಬೆಂಕಿ ಹ್ಯಾಗ ಆರಿಸ್ಯಾರು?

"ಇನ್ನು ಬೆಂಕಿ ಆರಿಸೋದಕ್ಕೆ ನೀರಾದ್ರೂ ಎಲ್ಲಿಂದ ಬರಬೇಕು? ಕುಡಿಯೋಕಾಗ್ಲಿ, ಬಳಸೋಕಾಗ್ಲಿ ಹೊಂಡ ಕೆರೆಯಿಂದಾನೆ ತರಬೇಕು. ಬೆಳಗ್ಗೆ ತಂದ ನೀರು ಮಧ್ಯಾಹ್ನದ ಹೊತ್ತಿಗೆ ಮನೆ ಕೆಲಸಕ್ಕೆ, ಸ್ನಾನಕ್ಕೆ, ಅಡಿಗೇಗೆ ಆಗಿಹೋಗಿರ್ತವೆ. ಮತ್ತೆ ಸಂಜೀಗೆ ಹೆಣ್ಣುಮಕ್ಕಳು ನೀರು ಹೊರಲೇಬೇಕು ಹೊಂಡ ಕೆರೆಯಿಂದ."

"ಗೌಡರ ಮನೆ ವಿಷಯ ಏನಾಯ್ತು?" ಎಂದು ನೆನಪು ಮಾಡಿದೆ.

"ಹೌದು! ಹಾಗೆ ಬೆಂಕಿ ಬಿದ್ದು ಉರಿಯೋಕ ಹತ್ತೋಣ ಪುಣ್ಯ ಇದ್ದವ್ರು ತಪ್ಪಿಸಿಕೊಂಡ್ರು. ಈ ಹೆಣ್ಣು ಹುಡುಗರು-ಸಣ್ಣವು, ಸಿಕ್ಕುಬಿದ್ವು. ತಪ್ಪಿಸಿಕೊಂಡ ಜನಕ್ಕೆ ಇವರ ಅರಿವೇ ಹಾರಿಹೋಗಿತ್ತು. ಪ್ರಾಣ ಉಳಿಸಿ ಕೊಳ್ಳೊ ಹೊತ್ತಿನಲ್ಲಿ ಎಲ್ಲ ತಮ್ಮ ತಮ್ಮ ರಕ್ಷಣಾ ತಾವು ನೋಡ್ತಾರೆ. ತಾವು ಪಾರಾಗೋದೆ ಪರಾಕಷ್ಟ. ಅಂಥಾದ್ರಲ್ಲಿ, ಉಳಿದವರು ಯಾರು ಬಂದ್ರು, ಯಾರಿಲ್ಲ, ಅನ್ನೋದು ಹ್ಯಾಗೆ ಗೊತ್ತಾದೀತು?

"ಆದರೆ ಇವರ ಅತ್ತಿ-ನನ್ನ ತಂಗಿ-ನೋಡ್ರಿ, ಆ ಹೆಣ್ಣು ಮಗಳನ್ನ ನೆನೀಬೇಕ್ರೀ ಯಾವಾಗಲೂ! ........... ...."

ಆತನ ಕಣ್ಣಲ್ಲಿ ಆಗ ನೀರು ತುಳುಕಿಬಂದಿತ್ತು. "ಆಕೀಗೆ ಈ ಹುಡು ಗರದು—ನಮ್ಮ ಅಣ್ಣನ ಮಕ್ಕಳದ್ದು ನೆನಪಾಯ್ತು. 'ಅಯ್ಯೋ! ನಮ್ಮಣ್ಣ

ಮಣ್ಣೋಳಗಿಕ್ಕ! ಕಂದವ್ಮಗಳನ್ನ ಬಿಟ್ಟಿ ಬಂದೆವಲ್ಲ ಉರಿಯೋ ಮನೆಯೊಳಗೆ!' ಅಂದ್ಲು. ನಮ್ಮ ಜೀವ ಜಗ್ಗ್! ಎಂದಿತು. ಅಷ್ಟು ಒರಲಿದವಳೆ ಉರಿ ಒಳಗೆ ನುಗ್ಗೋಕೆ ಹೊಕ್ಕಳು! ಜನ ಎಷ್ಟೋ ತಡೀತು. 'ಕಂಡೂ ಕಂಡೂ ಸಾಯೋದೆ? ಬ್ಯಾಡವ್ವ, ಬಾ!' ಅಂತ ಎಷ್ಟೋ ಕೂಗಿದೆವು. ಕೇಳಲಿಲ್ಲ ಆ ಹೆಣ್ಣುಮಗಳು.

''ಸಾವಿರಾರು ನಾಲಗೆ ಚಾಚಿ ಪತಂಗದ ಹುಳಾನ ಸುಡೋ ಹಾಂಗ ಸುಡುತ್ತಿತ್ತು ಬೆಂಕಿ ಜ್ವಾಲಿ. ಅದ್ರೊಳಗೆ ನುಗ್ಗಿದ್ಲು! ಆ ಭಯಂಕರ ದೃಶ್ಯ ನಮ್ಮಿಂದ ನೋಡೋಕಾಗಲಿಲ್ಲ! ಹೊಕ್ಕಳು ಒಳಗೆ; ಕೂಗಿದ್ಲು ಹೆಸರ್ಹಿಡಿದು ಹುಡುಗರದು

" ಆ ಹೊಗೆ ಒಳಗೆ, ಆ ಬೆಂಕಿ ಒಳಗೆ, ಆ ಸಿಡಿತದ ಆರ್ಭಟದಲ್ಲಿ, ಆ ಝಳದ ಕಾವಿನಲ್ಲಿ ಹುಡುಗರು ಮೂಲೆ ಸೇರಿ ಚೀರತಿದ್ದವಂತೆ ಒಂದೇ ಸಮ: "ಅವ್ವಾ! ಅಪ್ಪಾ! ಬಿಡಿಸಬರ್ರ‍್ಯಪ್ಪ ನಮ್ಮನ್ನ! ಸಾಯಿತೇವ್ರೊ! ಸತ್ತೆವೊ! ಅವ್ಮಾ! ಅಪ್ಪಾ!" ಆ ನರಕ ಜ್ವಾಲಿ ದಾಟಿ ಯಾರ ಕಿವೀಗೆ ಬಿದ್ದೀತು ಈ ಆಕ್ರಂದನ? ನನ್ನ ತಂಗಿ ನುಗ್ಗಿದವಳೆ ಕೂಗಿದ್ಲಂತೆ ಹೆಸರ್ಹಿಡಿದು. ಓಡಿಬಂದು ಮುಗೇಬಿದ್ದವಂತೆ. ಆಗ್ಗ ಆಕೀಗೆ ಕಾಲು ಕೈ ಸುಟ್ಟಿದ್ವು. ಕಣ್ಣಾ ರೆಪ್ಪೆ ಸಹ ಸುಟ್ಟುಹೋಗಿದ್ದವು.

"ಚಿಕ್ಕ ಹೆಂಗಸು. ಬೆಳೆದ ಇಬ್ಬರು ಹುಡುಗರನ್ನ ಹ್ಯಾಗ ಹೊತ್ತಾಳು? ಒಂದನ್ನೇನೊ ಎತ್ತಿಕೊಂಡ್ಲು; ಸೆರಗಿನಲ್ಲಿ ಮುಚ್ಚಿದ್ಲು; ಹೊತ್ತು ತರತಿದ್ದಳು. 'ಅತ್ತೀ ನನ್ನ ಬಿಟ್ಟು ಹೋಗ್ತೀಯಾ? ನಾನಿಲ್ಲೇ ಸಾಯುಬೇಕೇ ಸುಟ್ಟು?' ಅಂತ ಇನ್ನೊಂದು, ಕಡಿಯೊ ಮುಂದೆ ಕೂಗೂ ಕುರಿಮರಿ ಹಾಂಗ ಕೂಗ್ತು. 'ಬಂದೇ ತಡೀ!' ಅಂತ ಹೇಳಿ ಎತ್ತಿಕೊಂಡು ಓಡಿದಳು. ಜನಕ್ಕೆ—ತಾವು ಬದುಕಿದ್ದೇವೋ? ಇದೇನು ಕನಸೋ? ಅಥವ ಈಶ್ವರ ಲೀಲಾನೋ! ಅನ್ನೋ ಭ್ರಮೆ ಆಯಿತು ಆ ಹೆಣ್ಣು ಮಗಳ ಸಾಹಸ ನೋಡಿ.

"ಕೂಸ ಇಸಕೊಂಡ್ರು ಯಾರೋ. ಅದಿಷ್ಟೆ ಕ್ಷಣ ಅವಳಲ್ಲಿದ್ದದ್ದು. ಮತ್ತೆ ವಾಪಸ್ ನುಗ್ಗಿದ್ಲು! ಓಡಿದ್ಲು ಆ ಉರಿಯೋ ಮನಿಯೊಳಗೆ! 'ಅತ್ತೀ

ಬಿಡಿಸಬಾರೆ! ನಾಸಾಯಿತೇನೇ ಅವ್ವಾ!' ಅಂತಿತ್ತು ಆ ಹುಡುಗಿ. ಅದನ್ನು ಹೊತ್ತು ಇನ್ನೇನು ಹೊಸಲು ದಾಟಬೇಕು!—ಬಾಗಿಲು ಚೌಕಟ್ಟು ಸಿಡ್ದು ಉರಿಬಿತ್ತು. ಅದನ್ನೂ ದಾಟಿದ್ಲು. ದಾರಿ ಎಲ್ಲ ಬಂದ್. ಉರಿಯಾಗೆ ಕಣ್ ಕಾಣಿಸದಾದವು. ಮೈ ಬೇಯ್‌ತಿತ್ತು ಉರಿಯಿಂದ. ತಲೆ ಬವಳಿ ಬಂತು. 'ನಾನಂತೂ ಸತ್ತೆ! ಕೂಸನ್ನಾದ್ರೂ ಉಳಿಸಿಕೊಳ್ರಪ್ಪ!' ಅಂತ ಕೂಗಿದ್ಲು. ಜನ ಇದ್ದ ಬದ್ದದ್ರಲ್ಲಿ ಬಟ್ಟೆ, ಪಂಚೆ, ರುಮಾಲು ಒದ್ದೆ ಮಾಡಿ ಸುತ್ತಿಕೊಂಡು ಇವಳು ಬಿದ್ದಲ್ಲಿಗೆ ಬಂದು ಈ ಹುಡುಗೀನೂ ಆ ಹೆಣ್ಣು ಮಗಳನ್ನೂ ಹೊತ್ತು ತಂದ್ರು.

"ಮೈಕೈ ಎಲ್ಲ ಸುಟ್ಟು ಬೆಂದುಹೋಗಿತ್ತು. ಅಲ್ಲಿ ಜನಕ್ಕೆ ಏನು ಮಾಡ ಬೇಕು ಅನ್ನೋದೆ ತಿಳೀದಂತಾಯಿತು. ಯಾರಿಗಂತ ಮಾಡ್ತಾರೆ? ಎಷ್ಟು ಜನಕ್ಕಂತ ಮಾಡ್ತಾರೆ? ಎತ್ತಿಕೊಂಡು ಹೋಗಿ ಕೆರೆಯೊಳಗೆ ಹಾಕಿದರು. ಉರೀ! ಉರೀ! ಅಂತಿದ್ಲು; ಸ್ವಲ್ಪ ತಸುವು ಆದ್ರೂ ಆಗ್ಲಿ ಅಂತ ನೀರಲ್ಲಿ ಹಾಕಿದ್ರು.

"ರಾತ್ರಿ ಹೊತ್ತಿಗೆ ಅವಳ ಜೀವ ಹೋಯಿತು! ಆ ಮೇಲೆ ಏನದೆ? ಮುಂದಿನ ಕಥಿ ಇದ್ದದ್ದೆ. ಜನ, ನೆರಿಯೂರು—ಪ್ಯಾಟೆ ಜನ ಬಂತು; ಮುಂದಿಂ ದೆಲ್ಲ ಆಯಿತು. ಆದರೆ ಊರಿಗೂರೆ ಲಯ ಆಗ್ಹೋಯಿತು ಇದ್ದ ಬದ್ದ ದ್ರವ್ಯ ಸಮೇತ.

"ಈ ಹುಡುಗರ ಗಾಯ—ಬೆಂದಗಾಯ ಆವಾಗ ಆದವು. ಇದಿವ್ರಿಗೆ, ಪುನರ್ ಜನ್ಮಾನೆ ನೋಡ್ರಿ! ಅಂತೂ ಆ ಹೆಣ್ಣು ಮಗಳಿಂದ ಇವು ಬದುಕಿ ದವು. ಇವಕ್ಕಾಗಿ ಆ ಹೆಣ್ಣು ಮಗಳು ಪ್ರಾಣ ಕೊಟ್ಟಳು"!

ಹೀಗೆ, ಆ ಮನೆಯಾತ, ಈ ಲೋಕೋತ್ತರವಾದ ತ್ಯಾಗದ ಕಥೆಯನ್ನು, ಒಬ್ಬ ಸಾಮಾನ್ಯ ಸ್ತ್ರೀಯ ಅಸಮಮಾನವ ಪ್ರೇಮದ ಕಥೆಯನ್ನು ವಿವರಿಸಿದ. ಎಲ್ಲಿ ಕಾಣೋಣ ಇಂಥ ತ್ಯಾಗವನ್ನು?

ಯುದ್ಧದಲ್ಲಿ ಪ್ರದರ್ಶನ ಮಾಡಿದ ಸಾಹಸ ತ್ಯಾಗಗಳು ಪ್ರತಿಫಲ ಪಡೆ ಯುವುವು; ಲೋಕ ಪ್ರಚಾರ ಹೊಂದಿ ಪ್ರಶಂಸೆಗೆ ಪಾತ್ರವಾಗುವುವು. ಆದರೆ

ಈ ಸಾಹಸಮಯವಾದ ತ್ಯಾಗವು ಲೋಕದ ಕಣ್ಣಿಗೆ ಬರಲಿಲ್ಲ; ಪ್ರಚಾರ ಕಾಣಲಿಲ್ಲ.

ಆದರೇನು? ರುದ್ರನ ಆ ರುದ್ರಲೀಲೆಯಲ್ಲಿ ಆತನ ಪ್ರಕಟ ಆಟೋಪ ವನ್ನು ಎದುರಿಸಿ ಒಬ್ಬ ಸಾಧಾರಣ ಹೆಂಗಸು ನಾರೀ ಜಾತಿಯ ಔನ್ನತ್ಯವನ್ನು ಸ್ಥಾಪಿಸಿದಳು.

15–11–44

# ಹೆಣ್ಣು-ದೈವ

ಬ್ಯಾಟರಾಯನ ಪುರದಲ್ಲಿ, ಕೋಟೆ ಆಂಜನೇಯನ ಗುಡಿ ಮಗ್ಗುಲಲ್ಲಿ ವಾಸ ಮಾಡುತ್ತಿದ್ದ ಬಲು ದಿವಸದಿಂದ ಇದ್ದ ಫಾರೆಸ್ಟರು. ಅವನ ಹೆಸರು ಪಡುವಲಗಿರಿರಾಯ. (ಪಡುವಲಗಿರಿರಾವ್ ಎಸ್‌ಕ್ವೈರ್ ಎಂದು ಬರೆದು ಕೊಳ್ಳುತ್ತಾನೆ)

ಅಡವಿಗೆ ಹೋಗ್ತಿದ್ದ; ಮರ ಕಡಿಸುತ್ತಿದ್ದ. ಮರ ಸಾಗಿಸ್ತಾ ಇದ್ದ ಡಿಪೋಕ್ಕೊ? ಇನ್ನೆಲ್ಲಿಗೊ? ಗಿಡ ಹುಟ್ಟಿಸುತ್ತೇನೆ ಎಂತಿದ್ದ. ಮೇಲಿನವ ರಾಯ ಬಂದ್ರೆ ವಾಂಗಿಭಾತ್ ತಿನ್ನಿಸಿ, ಕರಿಶ್ಯಾವಿಗೆ ಪಾಯಸ ಹಾಕಿ, ಮೊಸರು ಅನ್ನದಲ್ಲಿ ಕೈಕೆಸರು ಮಾಡುತ್ತಿದ್ದ. ಬಂದಣ್ಣ-ಹೋಗಣ್ಣ. ಇವನು ಇಲ್ಲೆ ಇದ್ದಣ್ಣ.

ಇವನಿಗೆ ತಾನು ಸಂಪಾದಿಸಿರೊ ಸಂಪತ್ತನ್ನು ಮುಂದೆ ಅನುಭೋಗಿ ಸಲಿಕ್ಕೆ, ಇವನ ವಂಶ ಬೆಳೆಸಲಿಕ್ಕೆ, ಸತ್ತಾಗ-ಸತ್ತಮೇಲೆ ಸ್ವರ್ಗಕ್ಕೆ ನೂಕಲಿಕ್ಕೆ ಪುತ್ರೋದಯವಾಗಲಿಲ್ಲ ಇವನ ಸಹಧರ್ಮಿಣಿಯು ಗರ್ಭಾಂಬುಧಿಯಲ್ಲಿ. ಪಾಪ! ಅವಳು ಮಾಡಬಾರದ್ದನ್ನೆಲ್ಲ ಮಾಡಿದಳು; ತಿನ್ನಬಾರದ್ದನ್ನೆಲ್ಲ ತಿಂದಳು; ಹೋಗಬಾರದಲ್ಲಿಗೆಲ್ಲ ಹೋದಳು. ಮಕ್ಕಳಾದಾವೆ? ಮಕ್ಕಳ ಫಲ ಸಿಕ್ಕೀತೆ?

ಇವನೆ, ಈ ಬ್ಯಾಟರಾಯನ ಪುರದರಾಯ, ಇವನೆ ತನ್ನ ಹೆಂಡತಿಗೆ ಮಕ್ಕಳಾಗುವ ಔಷಧ ಒಂದು ತಂದ. ಮರ ಕೊರಿಯೊ ಒಂದು ಹುಳ ಇರ್ತದೆ; ಅದು ಬೆಳ್ಳಗೆ ದಪ್ಪನಾಗಿ ಗಿಡಕ್ಕೆ ಹತ್ತೊ ಹುಳದಂತೆ ಇರುತ್ತದೆ. ರಸ ಬಾಳೆ ಹಣ್ಣಿನೊಳಕ್ಕೆ ಅದನ್ನಿಟ್ಟು ಇವಳಿಗೆ ತಿನ್ನಿಸಲು ಏನೇನೋ ಮಾಡಿದ.

ಯಾವನೋ ಒಬ್ಬ ಘನಪಂಡಿತ ಬಂದು ಹಾಗೆ ಹೇಳಿದ್ದ. ಧನ್ವಂತರಿ ಎಲ್ಲೋ ಹುಟ್ಟಿದ್ದರೂ ಈತನಮನೇಲೆ ಚಾಪೆ ಹಾಸಿಕೊಂಡು ಮಲಗ್ತಿದ್ದನಂತೆ. ಅಂಥ "ವೈದ್ಯೋ ನಾರಾಯಣೋ ಹರಿಃ" ಹೇಳಿದ ಮಾತಿನಲ್ಲಿ, ಗರ್ಭೋತ್ಪಾದನ ಮಾಡುವ ಸುಲಭೋಪಾಯದಲ್ಲಿ ನಂಬಿಕೆ ಇಡದೆ ಹೇಗಾದೀತು? ಇವಳು ಚಿಣ್ಣಾಟದ ಹೆಣ್ಣು-"ರಸಬಾಳೆ ನಾತಿಂತೇನೀ; ಉಳಿದದ್ದು ನೀವು ತಿನ್ರಿ" ಎಂದಳು. ಇಬ್ಬರಲ್ಲೂ ಸಮನಾಗಿ ಆ ಉತ್ಪಾದನಾಶಕ್ತಿ ಬೆಳೆಯಲಿ ಎಂದು.

ಠೋಸಿ, ಮೂಡಲಗಿರಿ-ಅಲ್ಲ ಪಡುವಲಗಿರಿ ಸುಮ್ಮನಾದ. ಮನೆಯ ಹೆಂಣು ಗೊಡ್ಡಿ! ಹಾಳು ದೈವ! ಮದುವೆಗೆ ಮುನ್ನ ಗೊತ್ತಾಗಿದ್ದರೆ ಪರಮ ಸುಖಾ ಆಗೋದು!

"ನಮ್ಮ ರಾಯರ ಜನದಾಗ ಏನು ತಡ, ಯಾತಕ್ಕ ತಡ, ಯಾವುದಕ್ಕ ತಡ ಅಂಬೋದು ಆದೀತು? ಕೇಳ್ರಿಪ! ಒಂದ್ ದಿವಸ, ಒಂದೇ ದಿವಸ, ಎಡಗೈಲಿ ಚಿಟಕಿ ಹೊಡೆದ್ಹಾಂಗ ಎಡ್ನೆ ಸಂಬಂಧ ಬೆಳೆದು ಹೋತ್ರಿ. ತಂದರ್ರೀ, ಮನೀ ತುಂಬಿಸಿದ್ರೀ ರಾಯರು ಎಡ್ನೆ ಟುಕುಂಬ!" ಎಂದು ಒಂದುದಿನ ಹೇಳಿಕೊಂಡ ಅವನ ರೈತ ಗಿಡ್ಡ್ಯಾ.

ದೊಡ್ಡವಳು ಸಾವಿತ್ರಿ; ಕಿರಿಯವಳು ಭಾಗೀರತಿ. ಅಮ್ಮ ಅಥವ ಬಾಯಿ ಎಂತ ನಿಮಗೆ ಇಷ್ಟ ಬಂದ್ಹಾಗೆ ಸೇರಿಸಿಕೊಳ್ರಿ.

"ಇಬ್ಬರ್ಹೆಂಡಿರ ಆಟ........ ಇರಳು ತಗಣೆಯ ಕಾಟ, ಕಬ್ಬಕ್ಕಿ ಕಾಟ ............ ..." ಎಂದು ಸರ್ವಜ್ಞ ಹೇಳಿದ ಮಾತಿನ ಕಾಟ ನಿಮಗೆ ನೆನಪಿರಲಿಕ್ಕೆ ಸಾಕು. ಎರಡು ದೋಣಿಗಳಲ್ಲಿ ಕಾಲಿಟ್ಟು ನೀರಿನ ಮೇಲೆ ಸಾಗಿದರೆ ಹ್ಯಾಂಗಿದ್ದೀತು! ಹಾಂಗಿತ್ತು ಇವನ ಸಂಸಾರ.

ಆಗಾಗ ಒಂದೊಂದು ವೇಳೆ, ಹಿರಿಯಳಿಗೆ ಇಷ್ಟರಸ (ಹಿಸ್ಟೀರಿಯ) ಹೆಚ್ಚಾಗಿ ಕಷ್ಟವಾಗುತ್ತಿತ್ತು. ಮೊದಲಿನ ಲೀಲಾ ಈಗ ಸಾಧ್ಯವಿಲ್ಲ; ಸವತಿ ಇದ್ದಾಳೆ. ಅವಳು ಕಾವಲಿದ್ದಾಳೊ ಏನೊ?

ಈ ಇಷ್ಟರಸ ಅಂಟುರೋಗವೆ? ಏನೊ? ಡಾಕ್ಟರು ಹೇಳಿಲ್ಲ. ಅಂತೂ ಇಬ್ಬರು ಗೃಹಿಣಿಯರಿಗೂ ಒಂದೇ ಸಮ ಬಾಧಿಸತೊಡಗಿತು.

ಮಾಟ ಮಂತ್ರ ಎಲ್ಲ ಮಾಡಿದ ರಾಯ. ಆದ್ರೆ ಗಂಟು ಹಾಕುವುದು ಮೊದಲನೆ ಮಾಟ. ಅದಕ್ಕಾಗಿ ಅವ ಅಲೀಬೇಕು ಕಾನು, ಅಡವಿ, ಡಿಪೋ, ಗಡಿ ಆಚೆ ಇತ್ಯಾದಿ ಪ್ರದೇಶಗಳಲ್ಲಿ.

ಈ ಇಬ್ಬರ ಕಷ್ಟ ರಸವನ್ನೂ ಕಡಿಮೆ ಮಾಡುವವರ್‍ಯಾರು? ಏನೋ ಯಥಾ ಶಕ್ತಿ, ತಾನು ಬಂದಾಗ ತನ್ನ ಸೇವೆ ನಡೆಸಿ ಉಪಚರಿಸುತ್ತಿದ್ದ. ಅದರಲ್ಲೂ ಮತ್ತೆ ಜೋಯಿಸ ಯಾವನೊ ಇವನ ಕೈ ನೋಡಿ, "ಮೂರು ಜನ ಹೆಂಡ್ರು ನಿಮಗೆ!" ಎಂದಿದ್ದ.

ತನಗೆ ಬಾಳ ತೃಪ್ತಿ ಅಂತ ಅನಿಸಿದಾಗ ಈ ಮಾತು ಹೇಳಿ, "ಸಂಪತ್ತು ನನ್ನ ಮಡದೀನೆ! ಆಂದ್ರ, ಅಲ್ಲಿಗೆ, ಅವ ಹೇಳಿದ ಲೆಕ್ಕ ಸರಿಹೋತಿಲ್ಲೊ?" ಎಂತಿದ್ದ. ಇವನ ಕೈಕೆಳಗಿನವು ನಗ್ತಿದ್ದವು. "ಶ್ಯಾಣ್ಯಾರು ನಮ್ಮ ಧಣೇರು. ಹ್ಯಾಂಗ ಮಾತು ಹೊಂದಸ್ತಾರ ನೋಡ್ರಿ!" ಎಂದು ಕಪಿಮೂತಿ ಮಾಡ್ತಿದ್ದವು.

ಒಬ್ಬಳ ಮೇಲೊಬ್ಬಳಿಗೆ ಹೊಟ್ಟೆ ಉರಿ. ಗಂಡನ ಜೊತೆಗೆ ಇವಳಿದ್ದರೆ ಅವಳಿಗೆ, ಅವಳಿದ್ದರೆ ಇವಳಿಗೆ ದೆವ್ವದ ಕಾಟ ಜೋರು.

ಜೋಯಿಸನನ್ನ ಮತ್ತೆ ಕೇಳಿದ. "ಅದು ಹೀಂಗ ೮ನ ನಡದು, ಒಂದು ದಿನ ನೆಟ್ಟಗಾಗ್ತದೆ" ಎಂದ ಜೋಯಿಸ.

ಊರು ಡಾಕ್ಟರು ಘಾಟಿ. "ಬೆಪ್ಪ ಈ ಪಡುವಲಗಿರಿ! ಯಾತಕ್ಕೆ ಹೆಂಗಸರನ್ನ ಕಟ್ಟಿಕೊಂಡನೊ?" ಎಂದು ಊರಾಗೆಲ್ಲ ಡಂಗುರ ಸಾರ್‍ತಿದ್ದ ಡಾಕ್ಟರಿಗೆ ಗೊತ್ತಿಲ್ಲವೆ ಇವನ ಸಂಸಾರದ ಸ್ಥಿತಿ?

ಒಂದು ದಿನ ಮಟ ಮಟ ಮಧ್ಯಾಹ್ನ; ನೆಲದ ಮೇಲೆ ಬಿದ್ದರೆ ಚಟ ಪಟನೆ ಸಿಡಿದು ಹೋಗಬೇಕು ಹುರುಳಿಕಾಳು ಆ ಬಿಸಲಿನ ಝಳಕ್ಕೆ.

ಆ ದೆವ್ವಗಳಿಗೆ ಹೊತ್ತೆ? ಗೊತ್ತೆ? ಯಾವಾಗ ಹಿಡೀಬೇಕು? ಯಾವಾಗ ಬಿಡಬೇಕು? ಅನ್ನೋದು. ಆ ಉರಿ ಉರಿ ರಣಬಿಸಲಾಗ ಹಿಡಿದವು ಈ ಎರಡು ಹೆಣ್ಣುಗಳನ್ನು.

ಎರಡು ದಿನದ ಹಿಂದೆ ಬಂದಾಗ ರಾಯ, ಕಿರಿಯವಳು ಭಾಗೀರಥಿ ವ್ಯಾಲ ಬಾಳ ಪ್ರೇಮ ತೋರಿಸಿದ್ದ. ಶಿವಮೊಗ್ಗಾದಿಂದ ತಂದ ಕೆಂಪಿನ ಜಡೀ ಹೂವು ಕೊಟ್ಟ. ಇದೆಲ್ಲ ದೊಡ್ಡವಳ ಕಣ್ಣಮುಂದೆ ನಡೀತು. ಕಿರೀ ಹೆಂಡ್ತೀದೂ ಮೂಗು ಮಕ ನ್ಯಾರಾಗಿತ್ತು. ಬಣ್ಣಾನೂ ಕೆಂಪೇ. ಇದು ದೊಡ್ಡದು ಬಡಕಲು. ಒಣಗಿಕೊಂಡಿತ್ತು-ಗೊಡ್ಡಿ ಆ ಕಳದ್ಹಾಂಗ. ಕಿರೀ ಹೆಂಡ್ತಿ ಚೆಂದಾನೂ ಸೈ, ವಯಸ್ಸೂ ಸೈ, ಎಲ್ಲಾ ಬರೋಬರಿ. ಅಂದಮ್ಯಾಲೆ ರಾಯನ ಪ್ರೇಮ ಅಗ್ದೀ ಆಗಲಿಕ್ಕೇ ಸೈ.

ಭಾಗೀರಥಿ ಕನಡಿ ಇಟ್ಕೊಂಡು ಹೆರಳು ಹಾಕ್ಕೋತ ಕೂತಿದ್ಲು; ಶ್ಯಾವಂತ್ಗೀ ಹೂವ ಕಟ್ಟಿಟ್ಟಿದ್ಲು. ಹೊಸಾ ಜಡಿಬಿಲ್ಲೆ ಹತ್ತಿರದಾಗ ಕಣ್ಣು ಕುಕ್ಕೋ ಹಾಗ ಇತ್ತು. ತನ್ನ ಚೆಲುವು ಕನಡಿ ಮುಂದೆ ತೋರಿಸಿಕೋಂತ, ಸಣ್ಣ ರಾಗದಾಗ ಹಾಡಿಕೋತ, ತನ್ನ ತಾನೇ ನೋಡಿ ಮೆಚ್ಚಿಕೋತ, ಎದಿ ಮೈ ಭುಜ ಹೊರಳಿಸಿ ನೋಡಿಕೋತ ಒನಪು ಮಾಡ್ತಿದ್ಲ.

ಸ್ಯಾವಂತ್ರಿ (ಸಾವಿತ್ರಿ) ಇದನ್ನೆಲ್ಲ ನೋಡೋತನಕ ನೋಡಿದ್ರೂ ಅವಳಿಂದ ಸಹಿಸೋಕಾಗಲಿಲ್ಲ. ಅವಳ ತಲಿಕೂದ್ಲ ಬಾಚಣಿಗೆಯಿಂದ ಒತ್ತಿ ಹೆಕ್ಕೀ ಹೆಕ್ಕೀ ಉದುರಿ ಹೋಗ್ಯಾವೆ. ಬೈತಲಿ ಸುತ್ತ ಕೂದ್ಲ ಬಿದ್ದು ನುಣ್ಣಗ ಹೊಳೀತದ ನೆತ್ತಿ. ಹಿಂದಗಡೆ ಜಡಿ ನಾಯಿಮರಿ ಬಾಲದ್ಹಾಂಗ ಆಗೆದೆ. ಅವಳು ಹ್ಯಾಂಗ ಕನಡಿ ನೋಡಕೋತ, ಸಣ್ಣದನೀಲೆ ಹಾಡಕೋತ ಒನಪು ಮಾಡ್ಯಾಳು? ಅವಳು ಯಾವ ತುರುಬಿಗೆ ಶ್ಯಾಂತಿಗೀ ಹೂವು ಮುಡದಾಳು?

ಬಹಳ ದಿವಸದಿಂದ ಎದಿಕೊರೆದ ಉರಿ ಒಮ್ಮೆಗೆ ಭಗ್ ಎಂತ ಎದ್ದಿತು.

"ಅಹ! ಕುಣಿತಾನರ ಮಾಡೆ ಗೆಜ್ಜಿ ಕಟ್ಕೊಂಡು. ಸೂಳಿ ಆಗೋದು ಒಂದು ಬಾಕಿ ಅದೆ."

"ಯಾಕ? ಈಗ ನೀನು ಸೂಳಿ ಆಗಿಲ್ಲೇನು? ನಿಂದು ಗಬ್ಬು ಯಾರಿಗೂ ತಿಳೀಲಿಲ್ಲ ಅಂತೀಯೇನು?"

"ರಂಡೆ! ನನ್ನ ಸೂಳಿ ಅಂತಿಯೇನೆ?"

"ನೀನೆ ರಂಡಿ! ನಾನ್ಯಾಕ ರಂಡಿ ಆದೇನು?"

ಸುರು ಆತು, ಆತು! ಆತು! ಆತು! ಹ್ಯಾಂಗ ಆತು ಅಂದ್ರೆ, ಊರಹೊರಗಿನ ಕೇರಿ ಒಳಗ ನಡಿಯೊ ಹೆಂಗಸರ ಝಗಳಕ್ಕೂ ಇದಕ್ಕೂ ಏನೂ ಹೆಚ್ಚು ಕಡಿಮೆ ಇಲ್ಲಿದ್ಹಾಂಗ ನಡೀತು. ಒಬ್ಬಳು ಕೂದಲು ಕಿತ್ತಳು; ಇನ್ನೊಬ್ಬಳು ಗುದ್ದಿದಳು. ಇವಳು ಕಚ್ಚಿದಳು, ಅವಳು ಕುತ್ಗೀ ಹಿಚಕಿದಳು. ಇಷ್ಟಕ್ಕ ನಿಲ್ಲಲಿಲ್ಲ. ರೋಷ ಏರಿತು. ಉಕ್ಕೊ ಎಣ್ಣಿ ಹಾಂಗ ಏರಿತು.

ಚಿಕ್ಕವಳು ಒಲೆ ಕಟ್ಟಿಗಿ ತಂದು ಹಿರೇವಳಿಗೆ ಬೀಸಿದಳು. ಸಾವಿತ್ರಿ ಅದನ್ನು ತಡೀಲಾರದೆ ಕೈ ಒಡ್ಡಿದಳು. ಕೈ ಮಾರಿ ಎರಡಕ್ಕೂ ಬಿತ್ತು ಭಾರಿ ಏಟು. ರಕ್ತ ತಪತಪ ಹನಿಕಿತು. ಏಟಿನ ನೋವಿಗೆ ನರಳಿ, ಕುಸಿದು ಬಿದ್ಲು; ನೋವಿನಿಂದ ಗೊಳೋ ಅಂದ್ಲು. ನೋಡ್ರಿ, ಅದೇ ಸಮಯಕ್ಕ ಹಿಡೀತು ಅವಳನ್ನ ಅವಳ ಮಾಮಾಲಿ ದೆವ್ವ! ಕಿರೇವಳಿಗೆ ಮೊದಲೆ ಹಿಡಿದಿತ್ತು ಅವಳ ದಿನಚರಿ ದೆವ್ವ!

ನಡೀತ್ರೀ ಹೋರಾಟ. ಆ ಮೇಲೆ ಇಬ್ಬರೂ ಹೋರಿ ಸುಸ್ತಾಗಿ ಸ್ವಲ್ಪ ಸುಮ್ಮನಾದರು. ಸುಮ್ಮನಾದರು ಮಾತ್ರ; ಆದರೆ ಒಳಗಿನ ದೆವ್ವ ಇಬ್ಬರನ್ನೂ ಕೆಣಕದೆ ಸುಮ್ಮನೆ ಹೇಗಿದ್ದಾವು?

ಸಾವಿತ್ರಿ ಹೋಗಿ ಬಾಗಿಲು ಚಿಲಕ-ಅಗಳಿ ಎಲ್ಲ ಹಾಕಿ ಬಂದ್ ಮಾಡಿ ಬಂದ್ಲು. ನಡುಮನಿ ಮೂಲೆ ಹತ್ತರ ಚಿಮಣಿ ಎಣ್ಣಿ ಡಬ್ಬ ಇಟ್ಟಿದ್ದ ರಾಯು. ಹೋದ್ಲು, ಹೋಗಿ ಸೀಮೆ ಎಣ್ಣೆ ಬಗ್ಗಿಸಿದ್ಲು ತನ್ನ ಮೈಮೇಲೆ. ಸೆರಗು ತೋಯಿಸಿಕೊಂಡ್ಲು. ಅಡಿಗಿ ಮನಿ ಒಲಿ ಹತ್ತರ ಹೋಗಿ ಒಂದು ಕಟ್ಟಿಗೀ ತುಂಡಿಗೆ ಬಟ್ಟೆ ಸುತ್ತಿದ್ಲು. ಬಟ್ಟೀಗೆ ಚಿಮಣಿ ಎಣ್ಣಿ ಹೊಯ್ದ್ಲು. ಅದಕ್ಕೆ

ಬೆಂಕಿ ಹತ್ತಿಸಿದ್ಲು. ಉರಿಯೊ ಕೊಳ್ಳಿ ಒಂದು ಕೈಯೊಳಗೆ, ಇನ್ನೊಂದರಲ್ಲಿ ಚಿಮಣಿ ಎಣ್ಣೆ ಹಾಕಿದ ಡಬರಿ ಒಂದು. ತಲಿ ಕೆದರಿದೆ; ಜಡಿ ಬಿಚ್ಚಿದೆ; ಮುಖದಿಂದ ರಕ್ತ ಸೋರತದೆ. ಕರಾಳ ಆಕಾರ ಆಯಿತು ರಾಕ್ಷಸೀದು. ಬಂದು ನಿಂತಳು, ಭಾಗೀರಥೀ ಮುಂದೆ. "ಏನೇ ರಂಡೆ!" ಭಯಂಕರವಾಗಿ ಅರಚಿದ್ಲು ಸಾವಿತ್ರಿ. ಓಡಿಹೋಗಿ ಅವಳ ಮೇಲೆ–ತನ್ನ ಸವತಿ ಮೇಲೆ ಬಿದ್ಲು. ಅವಳು ವಯಸ್ಸಿನೊಳಗ ಚಿಕ್ಕವಳು, ತ್ರಾಣ ಇತ್ತು. ಬಲವಾಗಿ ನೂಕಿದ್ಲು. ಇವಳು ಬಿದ್ದಳು ಉರಿ ಕೊಳ್ಳಿ ಸಮೇತ.

ಎದ್ದಳು; ಅವಡು ಗಚ್ಚಿದಳು. ಭಯಂಕರ ಡಾಕಿನಿ-ಹೆಣ ತಿನ್ನುವ ಡಾಕಿನಿಯಂತಾದಳು. ವಿಕಟವಾಗಿ–ಕಠೋರವಾಗಿ ನಕ್ಕಳು. ತನ್ನ ಸೀರೆಗೆ ತಾನೆ ಉರಿ ಹಚ್ಚಿಕೊಂಡಳು. ಹಲ್ಲು ಕಟಕಟ ಕಡಿದು ಭಯಂಕರವಾಗಿ ಕೂಗಿ ಉರಿ ಸಮೇತ ಮುಂದೆ ನುಗ್ಗಿ, ಸೀಮೆ ಎಣ್ಣೆ ಸವತಿ ಮೇಲೆ ಉಗ್ಗಿ ಅವಳ ಕಡೆ ಹಾರಿ ಅಪ್ಪಿಸಿಕೊಂಡು ಹಿಡಿದಳು. ತನ್ನ ದೇಹದ ಉರಿ ಸಾಲದೆ ತನ್ನ ಕೊಳ್ಳಿ ಯಿಂದಲೂ ಅವಳಿಗೆ ಉರಿ ಇಟ್ಟಳು.

"ಅಯ್ಯೊ? ಸತ್ತೆ! ಸತ್ತೆ! ಬಿಡಿಸಬರ್ರಿ!"

ಬರೀ ಕೂಗು. ಭಗ್ಗನೆ ಉರಿ ಎದ್ದಿತು. ಎರಡೂ ಉರಿಗಳು ಒಂದ ನ್ನೊಂದು ಸೇರಲಾರದೆ ತಪ್ಪಿಸಿಕೊಂಡು ಓಡೋಹಾಗಿತ್ತು. ಕೊಳ್ಳಿ ದೆವ್ವಗಳು ರಣಕೇಳಿಯಿಂದ ಕುಣಿಯೋಹಾಗಿತ್ತು. ಕೋಣೆ ತುಂಬ ಸುತ್ತಿದ್ವು. ಗಿಮಿ ಗಿಮಿ ಗಿಮಿ ತಿರುಗಿದ್ವು. ಏನು ಭಯಂಕರ ದೃಶ್ಯ! ಉರಿ ಹತ್ತಿ ಮೃತ್ಯು ಸುಡುತ್ತಿದ್ದರೂ ಆ ಪೈಶಾಚೀ ಮನಸ್ಸಿನಲ್ಲಿ ಹಿಂಸಾ, ಸೇಡು, ಅದೂ ಉರೀತಲೇ ಇತ್ತು. ಅದೇ ಆ ಹಿಂಸಾ-ಸೇಡಿನ ಉರಿ ಈ ಎರಡು ದೇಹದ ಉರಿಗಳನ್ನೂ, ಈ ರಾಕ್ಷಸಿಯರ ವೈ ಉರಿಯನ್ನು ಸುತ್ತಿಸ್ಸಿ ಸುತ್ತಿಸಿ ಮತ್ತೆ ಒಟ್ಟುಗೂಡಿಸಿತು.

ವಿಕಾರ ಧ್ವನಿಯಿಂದ ಕೂಗು. ಮನುಷ್ಯನ ಕಣ್ಣಿಗೆ ಇದಕ್ಕಿಂತ ಘೋರ ದೃಶ್ಯ ಬೀಳಲಿಕ್ಕಿಲ್ಲ!

ಈ ಹೆಣಯಜ್ಞ ನಡೆಯುವಾಗ ಹೊರಗಡೆ ಜನಕ್ಕೆ ಮೊದಮೊದಲು

ಕೇಳಿಸಿದ್ದು ಮನೆಯಲ್ಲಿ ಡಬ್ಬ ಬೀಳಿಸಿದ ಶಬ್ದ, ಪಾತ್ರೆ ಕುಟ್ಟಿದ ಶಬ್ದ, ಚೀರಾಡಿದ ಶಬ್ದ. ಆದರೆ ಯಾರು ಬರ್ತಾರೆ ಆ ಬಿಸಲಿನಲ್ಲಿ ಈ ದೆವ್ವದ ಜಗಳ ಬಿಡಿಸಲಿಕ್ಕೆ ?

ಒಳಗಡೆ ಅಗಳಿ ಹಾಕಿಕೊಂಡಿದ್ದಾವೆ; ನೆಡಸಿದ್ದಾವೆ ರಣಯಜ್ಞ ಈ ಹೆಣ್ಣು ದೆವ್ವಗಳು ಸೇರಿ. ಗಿರಿರಾಯ ಅಡವಿ ಕಾಯತಿದ್ದಾನೆ.

ಚಿಟ್ಟನೆ ಚೀರಿದ ಶಬ್ದ ಕೇಳಿಸಿತು. ಮೊದಲು ನಿಂತು ನೋಡ್ತಿದ್ದ ಮೋಕಿ ಜನ ಈ ದೆವ್ವ ಹತ್ತಿದವರನ್ನ ಈಗ ನೋಡ್ಯಾರೆ? ಆದರೆ ಆ ಜನ ಈ ಗಲಾಟಿ ಕೇಳಿ ಎದರು ಮನೆಗಳ ಜಗಲಿ ಮ್ಯಾಲೆ ಬಂದು ಕೂತಿದ್ರು. ಕೇಳ್ತಾರೆ ಒಳಗ ನಡಿಯೊ ಈ ದೆವ್ವಗಳ ಯುದ್ಧ.

ಒಂದೇ ಸಾರಿಗೆ ಮನೆ ಹಂಚಿನ ಸಂದಿನಿಂದ ಭಗ್ಗನೆ ಹೊಗೆ ಕಾಣಿಸಿಕೊಂಡಿತು. ಕೂತ ಜನಕ್ಕೆ ಉಸಿರೇ ಕಟ್ಟಿಹೋಯಿತು.

ಮಗ್ಗುಲ ಮನೆ ಸೀತಮ್ಮ, “ಏನದು ?” ಅಂತ ಕಿಟಿಕಿ ಒಳಗ ನೋಡಿದವಳೆ ಎಚ್ಚರ ತಪ್ಪಿ, ಮೂರ್ಛೆ ಬಿದ್ದಳು. ಅವಳ ಮಕ್ಕಳು ಗಾಬರಿಯಾಗಿ ಆಸ್ಪತ್ರೆಗೆ ಓಡಿದರು ಡಾಕ್ಟರನ್ನು ಕರೆಯಲು.

ಜನಾ ನೋಡ್ತುಲೇ ಅದೆ. ಮನೆ ಹಂಚಿನ ಸಂದಿಯಿಂದ ಹೊಗೆ, ನಂತರ ಕೆಟ್ಟ ವಾಸನೆ–ಹೆಣ ಸುಟ್ಟ ವಾಸನೆ.

ಸಂಜೆ ಹೊತ್ತಿನಲ್ಲಿ ಊರ ಜನ ಬಂದು, ಪೋಲೀಸರು–ಪಂಚಾಯಿತದಾರರೂ ಸೇರಿ, ಬಾಗಿಲು ಒಡೆದು ಒಳಗೆ ನೋಡಿದ್ರೆ–ಏನದೆ ಅಲ್ಲಿ? ಬೂದಿ, ಎಲಬು, ಒಂದೆರಡು ಬೆಂದ ಕೈಕಾಲು ತುಂಡು, ಸುಟ್ಟ ಸೀರೆ ಚೂರು. ಸಾವಿತ್ರಿ–ಭಾಗೀರತೀರನ್ನ ದೆವ್ವ ಬೆಂಕಿ ಮೇಲೆ ಇಟ್ಟುಕೊಂಡು ಹೊತ್ತುಕೊಂಡು ಹೋದವಂತೆ–ಜನ ಹೇಳಿಕೊಂಡ ಕಥೆ.

ಆದ್ರೆ, ಸೀತಮ್ಮ ಕಂಡ ಕಥೆ ಬೇರೆ. ಹಿರಿಯವಳು ಚಿಮಣಿ ಎಣ್ಣಿ ಸುರಿದು ಮೈಗೆ ಉರಿ ಹಚ್ಚಿಗೊಂಡು ಚಿಕ್ಕವಳನ್ನು ಹಿಡೀತಿದ್ದಳಂತೆ. ಅವಳು

ಚೀರಾಡಿ ತಪ್ಪಿಸಿಕೊಳ್ಳಲು ಎಷ್ಟೋ ಮಾಡಿದ್ರೂ ಆಗ್ಲಿಲ್ಲವಂತೆ. ಇಬ್ಬರಿಗೂ ಉರಿಹತ್ತಿ, ಬೆಂದುಹೋದರಂತೆ.

ಮುಂದೆ ಆಗೋದು ಅಷ್ಟೇನೂ ಆಗಲಿಲ್ಲ-ರಾಯನ ಗಂಟು. ಆದರೆ ರಾಯ ಮತ್ತೆ ಇನ್ನೊಂದು ಹೆಣ್ಣು ತಂದಿದ್ದಾನೆ. ಅವನ ರೈತ ಗಿಡ್ಡ್ಯಾ ಹೇಳ್ತಾನೆ—"ರಾಯರ ಜನದಾಗ ಹೆಣ್ಣು ಅಗ್ಗ" ಅಂತಾ.

ಆ ಹೆಣ್ಣು ಯಾವಾಗಲೂ ಬಾಗಲ ಹೊರಕ್ಕೆ ಬಂದು ನಿಂದ್ರತಾಳೆ ಬೀದೀಲಿ ಬರೋರನ್ನ ಹೋಗೋರನ್ನ ನೋಡುತ್ತ. ಒಳಗಿದ್ದರೆ ದೆವ್ವದ-ತನ್ನ ಸವತೀರ ದೆವ್ವದ ಭಯವಂತೆ. ಅವು ಹೆದರಿಸುತ್ತಾವಂತೆ.

20–11–44.

# ಇಂದುವನ್ನು ನೆನೆದುಕೊಳ್ಳಲಿಲ್ಲ

ಮಧ್ಯಪ್ರಾಚ್ಯದ ಕ್ಯಾಷುಯಾಲಿಟಿ ಕ್ಲಿಯರಿಂಗ್ ಕ್ಯಾಂಪ್–ಯುದ್ಧದಲ್ಲಿ ಗಾಯಗೊಂಡವರ ಶಿಬಿರದಲ್ಲಿ ಆದಿನಾರಾಯಣ–ಮೈಸೂರಿನವ–ಗಾಯಾಳು–ಮಲಗಿ ಮೆಲ್ಲಗೆ ಕಣ್ಣುಬಿಟ್ಟ.

ಗಡಿಯಾರದ ಕಟ್ ಕಟ್ ಶಬ್ದವೊ ಎಂಬಂತೆ ಕಟ್ ಕಟ್ ಎಂದು ನೆಲದಮೇಲೆ ಶಬ್ದವಾಗುತ್ತದೆ. ಸ್ತ್ರೀದಳದ ನರ್ಸ್ ಒಬ್ಬಳು ಗಾಯಾಳುಗಳ ವಾರ್ಡಿನ ಮಧ್ಯೆ ಓಡಾಡುವ ಶಬ್ದ. ದೂರದಿಂದ ಧಡ್! ಧಡ್! ಎಂಬ ಶಬ್ದ ಕ್ಷೀಣವಾಗಿ ಕೇಳಿಸುತ್ತದೆ. ಆ ಶಬ್ದಕ್ಕೆ ಎಲ್ಲರೂ ಬೆಚ್ಚುವರೇ!

ಮಲಗಲು ಪ್ರಯತ್ನಿಸಿದ; ಕಳವಳಗೊಂಡ ಮನಸ್ಸಿಗೆ ದೇಹ ಸೋತಿದ್ದರೂ, ಬಾಧೆಯಿಂದ ಪೀಡಿತವಾಗಿದ್ದರೂ ನಿದ್ದೆ ಬಾರದು. ಇಪ್ಪತ್ತುನಾಲ್ಕು ಗಂಟೆಯೂ ಹೋರಾಟ ನಡೆಸಿದವನಿಗೆ ಈಗ ಇಪ್ಪತ್ತುನಾಲ್ಕು ಗಂಟೆಯೂ ಮಲಗಿ ನಿದ್ರಿಸುವುದಕ್ಕಾದೀತೆ? ನಿದ್ದೆ ಬಂದೀತೆ ಆ ಸ್ಥಿತಿಯಲ್ಲಿ?

ನರ್ಸ್ ಹತ್ತಿರ ಬಂದಳು "ಆ ಶಬ್ದವೇನು?" ಎಂದು ಕೇಳಿದ. ಹೇಳಳು; ಇವನೀಗ ಗಾಯಾಳು, ಅಲ್ಲದೆ ಶಿಪಾಯಿ. ಅದು ಮಿಲಿಟರಿ ವಿಚಾರ–ಹೇಳಬಹುದೊ? ಇಲ್ಲವೊ? ಇವನು ಬಹಳ ಒತ್ತಾಯಪಡಿಸಿದ. ಏನೋ ಎಡಬಲಕ್ಕೆ ನೋಡಿ, ಕೆಳಗೆ ಬಗ್ಗಿ, ಇವನ ಗಾಯದ ಕಟ್ಟುಗಳನ್ನು ಸರಿಮಾಡುವವಳಂತೆ ತೋರಿಸುತ್ತ "ಅದು ಎಲ್ ಆಲಮೀನ್ ರಣರಂಗ!" ಇವನ ಮೈ ನಡುಗಿತು–"ಅದು ಇಲ್ಲಿಗೆಷ್ಟು ದೂರ?"

"ನಲವತ್ತೈದು ಮೈಲಿ ದೂರ!"

"ನಾವಿರುವುದು ಎಲ್ಲಿ?"

"ಇದು ಅ-ಲೆ-ಗ್ಸಾ-ಂ-ಡ್ರಿ-ಯ !"

ಶಿಪಾಯಿ ಈ ಭಯಂಕರ ವಾರ್ತೆಯನ್ನು ಕೇಳಿ ಒನ್ಮ್ಮೆಲೆ ನಡುಗಿ ಬಿಟ್ಟನು.

ಆಕೆ ಹತ್ತಿರದ ಶೀಶೆಯಿಂದ ಸಕ್ಕರೆ ನೀರು ಕುಡಿಸಿದಳು.

"ಹೇಗಿದೆ ರಣರಂಗದ ಪರಿಸ್ಥಿತಿ? ಯುದ್ಧ ವ್ಯೂಹ ಸ್ಥಿರವಾಗಿದೆಯೊ ?"

"ಸೇನಾಪತಿ ವಜಾ ಆದ. ಮಧ್ಯ-ಪ್ರಾಚ್ಯದ ಮಹಾಸೇನಾನಿ ಸರ್.... ಅವರೇ ಸ್ವಯಂ ಯುದ್ಧಭೂಮಿಗೆ ಬಂದು ರಣರಂಗದಲ್ಲಿ ನಿಂತಿದ್ದಾರೆ." "ಹೇಗಿದೆ ಪರಿಸ್ಥಿತಿ ?" ಪುನಃ ಅದೇ ಪ್ರಶ್ನೆ. ಇವಳ ಉತ್ತರ: "ನನಗೇನು ಗೊತ್ತು ? ಏನೇನೋ ಸಮಾಚಾರ."

"ಏನು ಸಮಾಚಾರ ?"

"ನೀನೂ ಶಿಪಾಯಿ; ಅದನ್ನೆಲ್ಲ ಕೇಳಬಹುದೆ ?"

ಶಿಪಾಯಿ ನಾಲಗೆ ಕಚ್ಚಿದನು.

ಅವರಿಬ್ಬರಿಗೂ ಸಲಿಗೆ ಬೆಳೆಯಿತು. ಬೆಳೆಯಬೇಕಾಗಿಯೆ ಇತ್ತು. ಲೂಸಿ ಇವನನ್ನು ಎತ್ತಿ ಕೂಡಿಸುವಳು; ಸೊಂಟವನ್ನು ಹಿಡಿದುಕೊಂಡು ಹೆಗಲಮೇಲೆ ಕೈಯಿಟ್ಟು ಇವನನ್ನು ಮೆಲ್ಲಗೆ ನಡೆಸುವಳು. ಇವನ ಮಂಚಕ್ಕೆ ಹತ್ತಿರ ಕುಳಿತು ಇವನಿಗೆ ಓದುವಳು, ನಗುಮುಖದಿಂದ ಮಾತನಾಡುವಳು.

ಅವಳ ಶ್ವೇತ ವರ್ಣ, ದುಂಡುಮುಖ-ಅದಕ್ಕಾಗಿದ್ದ ರೂಪವಿನ್ಯಾಸ, ಕತ್ತಿನ ಕೆಳಗಡೆ ಕೊಂಚ ಕಾಣುವ ಬಿಳಿ ಎದೆ, ಅವಳ ಮಾತು, ನಗೆ, ನಯ, ಆ ಬಿಳಿಉಡಿಗೆ – ಯುದ್ಧಭೂಮಿಯಲ್ಲಿ, ಆ ಮರಳು ಕಾಡಿನಲ್ಲಿ, ಆ ಧೂಳಿ ಧೂಸರದಲ್ಲಿ, ಆ ಹಸಿವು ಕೊಳೆಯ ಮಧ್ಯೆ ಇದ್ದಿದ್ದರೆ ಇವಳನ್ನು ಕಾಣುತ್ತಿದ್ದೆನೆ ? ಎಂದು ಕೊಳ್ಳುತ್ತಿದ್ದ.

ಇವನಿಗೆ ಹಲ್ಲುಜ್ಜುವಾಗ ಅವಳು ನೀರು ಕೊಡುವಳು. ಹಲ್ಲುಜ್ಜುವು ದನ್ನು ಬಿಟ್ಟು ಅವಳನ್ನೆ ನೋಡುತ್ತಿದ್ದ. ಆಕೆ ಪ್ರಸನ್ನಳಾಗಿಯೇ "ಹಲ್ಲುಜ್ಜಿಕೊ" ಎನ್ನುವಳು.

ಲಜ್ಜೆಗೊಂಡು ಹಲ್ಲುಜ್ಜುವನು.

ರಣರಂಗದಿಂದ ಸುದ್ದಿ ಬಂದಿತು. ಉತ್ಸಾಹ ಎಲ್ಲೆಲ್ಲೂ! ಶತ್ರು-ರಾಮಲ್ ಹಿಂದಕ್ಕೋಡುತ್ತಿದ್ದಾನೆ. ಸರ್ ಆಕಿನ್‌ಲೆಕ್ ರಣರಂಗವನ್ನು ಕಾಪಾಡಿದ.

ಜರ್ಮನರು 'ಈಜಿಪ್ಟನ್ನು ವಶಪಡಿಸಿ ಅಲೆಗ್ಸಾಂಡ್ರಿಯವನ್ನು ಲೂಟಿ ಮಾಡುತ್ತೇವೆ' ಎಂದಿದ್ದರು. ಭಯ ನಿವಾರಣೆಯಾಯಿತು. ಈಜಿಪ್ಟ್ ಉಳಿಯಿತು.

ಒಂದು ದಿನ ಲೂಸಿ ಕೇಳಿದಳು ಆದಿನಾರಾಯಣನನ್ನು-

"ನೀನೆಲ್ಲಿಂದ ಬಂದೆ?"

"ಹಿಂದೂಸ್ಥಾನದಿಂದ!"

"ಅದು ನನಗೆ ಗೊತ್ತು-ಅಲ್ಲಿ ಯಾವ ಪ್ರಾಂತ?"

"ನೀನು ಹಿಂದೂಸ್ಥಾನ ನೋಡಿದ್ದೀಯ?"

"ನಾನು ಬಲ್ಲೆ! ನಾನಲ್ಲಿ ಇದ್ದೆ-ನನ್ನ ತಂದೆಯ ಜೊತೆಗೆ."

"ಎಲ್ಲಿ?"

"ಬೆಂಗಳೂರಿನಲ್ಲಿ!"

"ನಾನೂ ಅಲ್ಲಿಯವನೆ! ನಿಮ್ಮ ತಂದೆಯೆಲ್ಲಿ?"

"ಅವರು ಇಂಗ್ಲೆಂಡಿನಲ್ಲಿದ್ದಾರೆ. ನಾನು ಯುದ್ಧ ಆರಂಭವಾದಮೇಲೆ ಇಲ್ಲಿಗೆ ಬಂದೆ".

ಆದಿ, "ಹಾಗಾದರೆ ನೀನು ನಮ್ಮೂರ ಹುಡುಗಿ!" ಎಂದ.

"ಒಂದು ವಿಧದಿಂದ ಹಾಗೆಯೆ ಸರಿ'' ಎಂದಳೀಕೆ. ಆ ದೂರದ ಚೆಲುವಿನ ಊರನ್ನು ಅವಳ ಮನಸ್ಸು ನೆನೆಯಿತು. ನೆನೆದ ಮನಸ್ಸು ಹರ್ಷ ಗೊಂಡಿತು. "ಗುಡ್ ಓಲ್ಡ್ ಬ್ಯಾಂಗಳೂರ್!'' ಎಂದು ಉದ್ಗಾರ ಎತ್ತಿದಳು.

ಇಬ್ಬರೂ ಆ ಊರಿನ ಬಗ್ಗೆ ಮಾಡಿಕೊಂಡರು. ರಿಚ್‌ಮಂಡ್‌ಟೌನ್, ಫ್ರೇಸರ್ ಟೌನ್, ಸೆಂಟ್ ಜಾನ್ಸ್‌ಹಿಲ್, ಆ ಬೀದಿಗಳು ಅಲ್ಲಿನ ಪಾರ್ಕು ಗಳು, ಸಿನಿಮ ಎಲ್ಲ ನೆನಪಿಗೆ ಬಂದವು. ಒಂದೆರಡು ತಮಿಳು ಮಾತುಗಳನ್ನು ಅಬದ್ಧವಾಗಿ ಉಚ್ಚರಿಸಿದಳು. ಹಿಂದೂಸ್ಥಾನಿ ಮಾತುಗಳನ್ನು ರಾಗವಾಗಿ ಎಳೆದು ಹೇಳಿದಳು.

"ಕನ್ನಡ ಮಾತು ಹೇಳು'' ಎಂದ ಆದಿ.

"ಐ ಡೋಂಟ್ ನೋ ಕ್ಯಾನರೀಸ್."

(ನನಗೆ ಕ್ಯಾನರೀಸ್ ಬರುವುದಿಲ್ಲ)

"ಇಷ್ಟೇನೆ ನೀನು ಬೆಂಗಳೂರು ನೋಡಿದ್ದು!''

ಒಂದು ದಿನ ತನ್ನ ಯುದ್ಧದ ಅನುಭವ ಅವಳು ಕೇಳಲು, ಹೇಳಿದ. ಶಿಪಾಯಿ ಹಾಗೆ ಹೊರಗೆಡಹಬಾರದು. ಆದರೆ ಇವಳೀಗ ಆಪ್ತಳು, ಇವನ ಸ್ವದೇಶದ ಸ್ವಂತ ಊರಿನ ಹುಡುಗಿ. ಅವಳೇ ಹೇಳಿದ್ದಳು: "ಐ ಆ್ಯಮ್ ಆಲ್‌ಮೋಸ್ಟ್ ಆ್ಯನ್ ಇಂಡಿಯನ್ - ನಾನು ಬಹಳ ವಿಧದಿಂದ ಭಾರತೀ ಯಳೇ ಆಗಿದ್ದೇನೆ.''

ಇವನು ನಡೆಸಿದ ಕದನ ಟೋಬ್ರೂಕ್ - ಇತಿಹಾಸ ಪ್ರಸಿದ್ಧವಾದ ಟೋಬ್ರುಕ್ ಹತ್ತಿರ. ಆ ಕದನದಲ್ಲಿ ಇವನ ಅಧೀನದ ಪಡೆ - ಕಂಪನಿಯು ಲ್ಲೆಲ್ಲಾ ಅಳಿದು ಉಳಿದವರು ನಾಲ್ಕು ಜನ. ಹಿಮ್ಮೆಟ್ಟಲು ಆಜ್ಞೆಯಾಗಿತ್ತು. ಹೇಗೊ ಆ ರಣಭಯಂಕರ ರಾಮೆಲ್ಲನ ಹೊಡೆತ ಈಗ ತಪ್ಪಿಸಿಕೊಂಡು 'ಉಸಿ ರಾಡಲು ಅನುವಾದರೆ ಸಾಕು, ಮುಂದೆ ನೋಡೋಣ, ಎಂಬುದೆ ಆಗಿನವರಿ ಗಿದ್ದುದಾದ ರಣ ತಂತ್ರ.

ಟೋಬ್ರುಕ್ ಹತ್ತಿರ ನಡೆದ ಆ ಒಂದು ದಿನದ ಕದನದಲ್ಲಿ - ಅದರ ವಿವರಗಳನ್ನು ಯಾರೂ ಸರಿಯಾಗಿ ಅರಿಯಲೇ ಇಲ್ಲ - ಮುಂದೆ ಅದರ ಬಗ್ಗೆ ಚರ್ಚಿಲ್ಲರ ವಿವರಣೆ ಬರುವಾಗ ಸುಮಾರು ಒಂದು ನೂರಾ ಐವತ್ತು ಬ್ರಿಟಿಷರ ಟ್ಯಾಂಕುಗಳು ನಾಶವಾದವು. ಅದೇ, ಅಲ್ಲಿಂದ ಆರಂಭವಾದ ಸೋಲು ಹಿಮ್ಮೆಟ್ಟುವಿಕೆಗೆ ಕಾರಣ. ಅಲ್ಲಿಂದ ದೌಡಾಯಿಸಿ ಅಟ್ಟಿಸಿಕೊಂಡು ಬಂದವನು ಈಜಿಪ್ಟ್ ಗಡಿದಾಟಿ ಎಲ್ ,ಅಲಮೀನ್ ಹತ್ತಿರ ದಮ್ಮು ಆರಿಸಿಕೊಳ್ಳಲು ನಿಂತನು ಆ ಜರ್ಮನ್ ಆಫ್ರಿಕ ಕೋರ್ ಅಧಿಪತಿ, ಜನರಲ್ ರಾಮೆಲ್.

ನಮ್ಮ ಆದಿನಾರಾಯಣನೂ ಸೋತುದೇ ಅಲ್ಲಿ. ಸಹಸ್ರಾರು ಸಂಖ್ಯೆಯ ಸೈನ್ಯವೇ ಸೋತು ಹಿಂಜರಿದೋಡಿದಾಗ, ಒಂದು ಕಂಪೆನಿಯ ನಾಯಕ ಆ ಶತ್ರು ಪೂರವನ್ನು ತಡೆದಾನೆ? ಜನರಲ್ ರಿಟ್ರೀಟ್ ಆರ್ಡರ್–ಹಿಮ್ಮೆಟ್ಟಲು ಹುಕುಂ ಆದಾಗ ಯುದ್ಧ ನಡೆಸುತ್ತ ಸರಿದನು. ಇವನ ಸಂಗಾತಿಗಳು ಎಲ್ಲರೂ ಹೋಗಿ, ಇವನೊಂದಿಗೆ ಮೂರು ಜನರುಳಿದು ಒಂದು ಜೀಪ್ (ಯುದ್ಧದ ಮೋಟಾರ್) ಒಂದರಲ್ಲಿ ಓಡಿದರು. ಓಡುವಾಗ ಮೇಲಿನಿಂದ ಒಂದು ಶತ್ರು ವಿಮಾನ ಬಾಂಬು ಬೀಳಿಸಿತು. ಬಾಂಬು ಸಿಡಿದು ಗಾಡಿ ಸಿಡಿಯಿತು. ಆಮೇಲಿನ ಕಥೆ ಗೊತ್ತಿಲ್ಲ.

ಅವನು ಕಣ್ಣು ಬಿಟ್ಟಾಗ ಈ ಯುದ್ಧದ ಅಸ್ಪತ್ರೆಯಲ್ಲಿರುವುದು ಕಾಣಿಸಿತು. ಮಲಗಿದ್ದ ಗಾಯಾಳುಗಳು ಕಂಡರು. ಮರುಭೂಮಿಯ ಮಧ್ಯೆ ತೋರಿದ ಜಲದಾಣದಂತೆ ಈ ಲೂಸಿ, ಇವರೂರ ಹುಡುಗಿ-ಬಿಳಿ ವೈಯ ಚೆನ್ನೆ ಇದ್ದಳು.

ಇವನ ಗಾಡಿ ಬಾಂಬಿನ ಸಿಡಿತಕ್ಕೆ ಪಲ್ಟಿ ಹೊಡೆದಾಗ ಗಾಡಿಯಲ್ಲಿದ್ದವರೆಲ್ಲ ಹಾರಿಬಿದ್ದು ಉರುಳಿದರು. ಇವನಿಗೆ ಬಲಗಡೆಯ ಪಕ್ಕೆಲುಬುಗಳೆರಡು ಮುರಿದಿದ್ದವು. ದೇಹ ಊನವೇ ಆಗಿಹೋಗುವುದೋ ಎನ್ನುವಷ್ಟರ ಮಟ್ಟಿಗಾಗಿತ್ತು.

ದೇಹ ಕ್ರಿಯೆಯನ್ನು ಮನಸ್ಸು ಅವಲಂಬಿಸಿದೆ. ದುರ್ಬಲವಾದ ಮನಸ್ಸು ಯಾತನೆಗೊಳ್ಳುತ್ತದೆ.

ಸೋತು ಹಿಮ್ಮೆಟ್ಟಿ ಗಾಯಗೊಂಡು ಜೀವಕ್ಕೆ ಊನ ತಂದುಕೊಂಡವನ ಮನಃಸ್ಥಿತಿ ಹೇಗಿರಬೇಕು?

ಸ್ವದೇಶ ಬಿಟ್ಟು, ಎಲ್ಲಿಯೊ ವಿಜಾತೀಯುವಾದ ನಾಡಿನಲ್ಲಿ ಕದನ ನಡೆಸಿ, ನರಳುತ್ತ ಬಿದ್ದಿರುವುದು ಯಾರಿಗಾಗಿ? ಯಾವುದಕ್ಕಾಗಿ?

ತನ್ನ ಸರ್ಕಾರದಲ್ಲಿ ಪೊಲೀಸ್ ಶಾಖೆಯಲ್ಲಿದ್ದ. ಇರಬಹುದಾಗಿತ್ತು ಅಲ್ಲೇ. ಪದವಿ, ಸಂಬಳ, ಮಿಲಿಟರಿ ಜಬರುದಸ್ತಿ ಇದಕ್ಕೆ ಮೋಹಿತನಾದೆ ನಲ್ಲ! ಎಂಬ ಕಳವಳ.

ಆಗ ಹಿಂದೂಸ್ಥಾನದ ಕಥೆ ಸಮಾಧಾನ ತರುವಂತಿರಲಿಲ್ಲ. ಭಾರತದ ಗಡಿತನಕ ಜಪಾನರು ನುಗ್ಗಿದರು. ದೇಶವಾದ್ಯಂತ ಗಲಭೆ, ರಾಜಕೀಯ ಗಲಭೆ-ಅಕಾರ್ಯ ಹಿಂಸಾ ಕಾರ್ಯಗಳು-ಸುದ್ದಿ ಕೊಂಚಕೊಂಚ ಹತ್ತಿತ್ತು.

ದಾಸ ಜನಾಂಗಕ್ಕೆ ಸೇರಿ, ದಾಸ ಜನಾಂಗದವರೂ ಎಂಬ ಅರಿವು ತಿಳಿದಾಗ, ನಾವೇಕೆ ದಾಸರಾಗಿರಬೇಕು? ಎಂದು ಕೇಳಿಕೊಂಡಾಗ, ಇನ್ನೂ ದಾಸರಾಗಿಯೆ ಉಳಿದರೆ ಅದರಂತೆ ಕಾಣಲ್ಪಟ್ಟರೆ ಸ್ವಾಭಿಮಾನಿಗಳಿಗೆ ಎಂತಹ ನೋವು!

ಆದರೆ ಆಡಲುಬಾರದು. ತನ್ನ ವೃತ್ತಿ ಅಂತಹ ಶಂಕೆಗಳಿಗೆ ಅವಕಾಶ ಕೊಡುವಂತಹುದಲ್ಲ. ಆದರೆ ತಾನು ಮನುಷ್ಯ - ವಿಚಾರಮಾಡಬಲ್ಲ ಮನುಷ್ಯನಲ್ಲವೆ?

ಲೂಸಿಯೊಂದಿಗೆ ಇದೇ ಮಾತು: "ಇದು ಬ್ರಿಟಿಷರ ಯುದ್ಧ!" ಎನ್ನುವನು. ಅವಳು ಕೆರಳಿ "ಇದು ನ್ಯಾಯಕ್ಕೆ, ಸತ್ಯಕ್ಕೆ, ಸ್ವಾತಂತ್ರ್ಯಕ್ಕೆ, ಡೆಮಾಕ್ರಸಿಗೆ ಯುದ್ಧ"! ಎನ್ನುವಳು ಮೂಗನ್ನು ಅರಳಿಸುತ್ತ. ಲೋಕವನ್ನು ಶತಮಾನ ಪರ್ಯಂತ ಆಳಿದ ಆ ಜಾತಿಯ ಬಿಸಿ ರಕ್ತ ಆ ರೀತಿ ಹೇಳಿಸುತ್ತಿತ್ತು.

"ಡೆಮಾಕ್ರಸಿ! ಎಲ್ಲಿದೆ ಆ ಡೆಮಾಕ್ರಸಿ? ನಮಗೆ ಇಲ್ಲ. ಅಟ್ಲಾಂಟಿಕ್ ಘೋಷಣೆ ಭಾರತಕ್ಕೆ ಅನ್ವಯಿಸದು, ಎಂದು ನಿಮ್ಮ ಪ್ರಧಾನಿ ಹೇಳಿದ್ದಾನೆ!"

"'ಯುದ್ಧವುಗಿದ ನಂತರ ನಿಮಗೆ ಸ್ವಾತಂತ್ರ್ಯ ಕೊಡುತ್ತೇವೆ' ಎಂದು ನಾವು ಹೇಳಿಯೇ ಇದ್ದೇವೆ."

"ಹಿಂದಿನ ಯುದ್ಧದಲ್ಲೂ ಅದೇ ಮಾತು ಹೇಳಿದ್ದಿರಿ?"

"ನಾನಾಗ ಇರಲಿಲ್ಲ."

ಇಬ್ಬರೂ ನಕ್ಕರು.

"ನೋಡು, ಲೂಸಿ! ಜರ್ಮನರು ಉಪಟಳ ಮಾಡಿದರೆ ನಮ್ಮನ್ನೇಕೆ ಎಳೆಯಬೇಕಾಗಿತ್ತು ಯುದ್ಧಕ್ಕೆ? ನಮ್ಮ ಸಮ್ಮತಿ ಪಡೆಯಲೇ ಇಲ್ಲ!"

"ನೀನು ಶಿಪಾಯಿ; ಆ ರೀತಿ ಮಾತನಾಡಬಾರದು?"

"ನಾನೊಬ್ಬ ಕಾನ್‌ಸೆನ್ಷಿಯಸ್ ಅಬ್ಜೆಕ್ಟರ್-ಆತ್ಮವಿಶ್ವಾಸ ಪೂರ್ವಕ ವಿರೋಧಿಸುವವನು, ನಾನೂ ವಿಚಾರ ಮಾಡಿದ್ದೇನೆ."

"ನೀನು ಹಾಗೆ ಹೇಳಕೂಡದು. ಇದು ವಿವೇಕವಲ್ಲ."

"ಇಂತಹ ಸ್ನೇಹದ ಗೆಳತಿ, ಲೂಸಿ, ನನ್ನ ತಲೆ ಹೋಗುವಂತೆ ಮಾಡುವುದಿಲ್ಲ."

ಬಹು ಪ್ರಸನ್ನೆಯಾಗಿ ಆ ಹುಡುಗಿ ನಕ್ಕಳು.

"ನೋಡು ನಮ್ಮ ನಾಯಕರನ್ನೆಲ್ಲ ಹಿಡಿದಿಟ್ಟಿದ್ದಾರೆ."

"ಹೌದು, ಗ್ಯಾಂಡಿಯನ್ನು ಹಿಡಿದಿದ್ದಾರಂತೆ."

"ಗ್ಯಾಂಡಿ ಅಲ್ಲ; ಗಾಂಧೀ!"

"ಗ್ಯಾಂಡೀ"

"ಹಾಗಲ್ಲ! ಗಾ...."

"ಗ್ಯಾ"

"ಛೀ! ನಿನಗೆ ಉಚ್ಚರಿಸುವುದಕ್ಕೆ ಬರುವುದಿಲ್ಲ!"

"ಜಿ ಮುಂದೆ ಎ ಏಕೆ ಹಾಕಿದ್ದೀರಿ? ಅದರ ಉಚ್ಚಾರ ಗ್ಯಾ ಆಗುತ್ತದೆ."

"ಇದು ಇಂಗ್ಲಿಷ್ ಉಚ್ಚಾರವಲ್ಲ; ಹಿಂದೂಸ್ಥಾನಿ ಹೆಸರು."

"ನನಗೆ ಹಿಂದುಸ್ಥಾನಿ ಕಲಿಸು," ಎಂದಳು ಲೂಸಿ.

"ನೀನು ಭಾರತಕ್ಕೆ ಬಾ, ನಮ್ಮ ಊರಿನಲ್ಲಿ ಹಿಂದೂಸ್ಥಾನಿಗಿಂತ ಸುಂದರವಾದ ಪ್ರಾಚೀನವಾದ ನನ್ನ ಕನ್ನಡ ಕಲಿಸುತ್ತೇನೆ" ಎಂದ. ಏನೋ ದೂರದಾಶೆ ಇಟ್ಟುಕೊಂಡು ಆ ಮಾತು ಹೇಳಿದ.

ಏನೋ ಯೋಚಿಸುವವಳಂತೆ, "ನೋಡೋಣ ಯುದ್ಧ ಮುಗಿಯಲಿ" ಎಂದಳು.

"ಹೇಳು! ಇನ್ನೊಂದು ಸಾರಿ ಗಾಂಧಿ, ಮಹಾತ್ಮಾ ಗಾಂಧಿ ಎನ್ನು!"

"ಗ ಆಂಡಿ, ಮಹಾಟ್ಮ ಗ ಆಂಡಿ" ಎಂದಳು.

"ಏನು ನಾಲಗೆಯೊ ಇಂಗ್ಲಿಷರದು! ಉಚ್ಚಾರ ಮಾಡಲು ಬರುವುದೇ ಇಲ್ಲ!"

"ನೀನಿವತ್ತು ಬಹಳ ಮಾತನಾಡಿದ್ದೀಯ, ಸುಮ್ಮನೆ ಮಲಗು" ಎಂದು ಗದರಿಕೊಂಡು ಹೋದಳು.

ಏನು ಗ್ರಹಚಾರ ಬಂದೀತೋ ಇವತ್ತಿನ ಮಾತಿನಿಂದ ಎಂದುಕೊಂಡ. ತಮ್ಮೂರ ಹುಡುಗಿ-ಹಾಗೆ ಮಾಡಲಾರಳು, ಎಂದು ಧೈರ್ಯ ತಂದುಕೊಂಡ.

ಆವಳೆ ಬಂದು ಮಾತನಾಡಿಸಿದಳು ಇನ್ನೊಂದು ದಿನ.

"ಹಲ್ಲೊ! ವೈ ಪೇಟ್ರಿಯಟ್!"

ತಾನು ಪೇಟ್ರಿಯಟ್-ದೇಶಭಕ್ತ ಅಲ್ಲ. ಗಾಂಧಿ ಹೇಳಿದ್ದ ಮಾತು, "ಸೈನ್ಯಕ್ಕೆ ಸೇರಿದವರು ಹಣದಾಸೆಗಾಗಿ ಸೇರಿದರು" ಎಂಬುದು ಮನಸ್ಸನ್ನು ಕೊರೆಯುತ್ತಿತ್ತು.

ಸುಮ್ಮನಿದ್ದ.

ಆಕೆ ಮಾತನಾಡಿಸಿ ಉಪಚರಿಸಿ ಹೋದಳು.

ಇವನು ಆಕೆಯನ್ನೇ ಕುರಿತು ಯೋಚಿಸತೊಡಗಿದ. ಮನಸ್ಸಿನಲ್ಲಿ ಏನೇನೋ ಹೊಳೆಯಿತು. ಯೋಚನೆಗಳು ಹಾಗೆಯೆ ಬಿಚ್ಚುತ್ತ ಬಿಚ್ಚುತ್ತ ಬಂದವು. ಈ ವಿದೇಶ–ಆಫ್ರಿಕವನ್ನು ನೆನಪಿಗೆ ತಂದುಕೊಂಡ. ಎರಿಟ್ರಿಯ, ಅಬಿಸೀನಿಯಗಳಲ್ಲಿನ ಯುದ್ಧ-ತಮ್ಮವರ ಹೆಣಗಳ ಮೇಲೆ ಟ್ಯಾಂಕುಗಳು ಮುನ್ನುಗ್ಗಿ ಕಾದಾಟ ನಡೆಸಿದುದು; ದಿನಗಟ್ಟಲೆ ಆಹಾರ ದೊರೆಯದುದು; ಹಬಸಿ ಜನರ ಸಹಕಾರದಿಂದ-ಖರ್ಜೂರ, ಆಡಿನ ಹಾಲು ಅವೇ ಪರಮಾನ್ನವಾಗಿ ಪರಿಣಮಿಸಿದುದು; ಆ ಹಬಸಿ ಸ್ತ್ರೀಯರು,ಅವರ ತಲೆಯ ಹಿಕ್ಕುಗಟ್ಟಿದ ಉಂಗುರು ಕೂದಲು, ಕರಿಬಣ್ಣ ಬತ್ತಲೆ ಎದೆ.......ಹಾಗೆಯೇ ಯೋಚನೆ ಈಜಿಪ್ಟ್-ಲಿಬಿಯಗಳಲ್ಲಿ ಸುಳಿಯಿತು.

ತಾಳೆಮರ, ನೈಲ್ ನದಿ, ದೋಣಿಗಳು, ಊರುಗಳ ಇಕ್ಕಟ್ಟಾದ ಸಂದಿಗೊಂದಿಗಳು, ಮಸೀತಿಗಳು, ತೆಳುವಾಗಿ ಮೇಲೆದ್ದಿರುವ ಮಿನಾರತುಗಳು, ಆ ಆ್ಯರಬ್ ಹೆಂಗಸರು-ಬರೀಕಣ್ಣು, ಕಾಡಿಗೆಯಿಂದ ಸುತ್ತುವರಿದ ಬರೀ ಕಣ್ಣು, ಹೊನ್ನಬಣ್ಣದ ಮೂಗು ಇದಿಷ್ಟೆ ದೇಹಭಾಗ ಕಾಣಿಸುತ್ತಿದ್ದುದು. ಉಳಿದುದೆಲ್ಲ ವಸ್ತ್ರಾಚ್ಛಾದಿತ ಪಾದಸಹಿತ. ಪ್ರತಿಯೊಬ್ಬ ಅಂತಹ ನಾರಿಯೂ ಆಲಿಬಾಬಾನ ಕತೆಯಲ್ಲಿ ಕಳ್ಳರೊಡೆಯನಿಗೆ ಚೂರಿಯಿಕ್ಕಿದ ಆ ಹುಡುಗಿ-ಅವಳ ಹೆಸರು? ಮಾರ್ಜಿಯ–ಏನೋ? ಅವಳಂತೆ ಕಾಣುವಳು. ಆ ಹೆಂಗಸರನ್ನು ನೋಡಿದರೆ ಅವರ ಕರೀ ಕಣ್ಣುಗಳ ಆಳವನ್ನು ಗಮನಿಸಿದರೆ ರಾಮೆಲ್ಲನಿಗೇ ಏಕೆ, ಅವರಪ್ಪನಿಗೂ ಚೂರಿ ಭಯವಾದೀತು! ಹೀಗೆ ಯೋಚನೆ. ನಂತರ ಮತ್ತೆ ಈ ಲೂಸಿಯ ನೆನಪು. ಲೂಸಿ! ಲೂಸಿ! ಎಂದು ನಾಲ್ಕಾರು ಬಾರಿ ಕರೆದುಕೊಂಡ. ಲೂಸಿ! ಎಂದೊಡನೆ ಎದೆ ಪಟ ಪಟನೆ ಬಡಿಯತೊಡಗಿತು. ಲೂಸಿಯ ಕಾಲ ಕಟ್ ಕಟ್ ಶಬ್ದ ಕೇಳಿ ಬಡಿಯುವುದು. ಯಾವುದೊ ಭ್ರಮೆಯಿಂದ ಕೂಡಿ, "ಇಂಥ ಹೆಣ್ಣು ನನಗಿದ್ದರೆ!" ಎಂದುಕೊಂಡ. ಅವಳ ನೀಲ ಕಣ್ಣುಗಳು, ಹೃದಯದ ಆಳವೆಲ್ಲ ಮೇಲೆದ್ದು ಕಾಣಿಸಿದ ಆ ನೀಲ ಕಣ್ಣುಗಳು, ಅಕಳಂಕವಾದ ಬಿಳಿ ಮೈ ಕಾಂತಿ, ಕಪಟವಿಲ್ಲದ ಮಾತು, ನಿರ್ವ್ಯಾಜ ಸ್ನೇಹ, ಮಮತಾಮಯವಾದ ಸೇವಾಬುದ್ಧಿ, ಯುದ್ಧದ ಕಾವಿನಲ್ಲಿ ಪರದೇಶದಲ್ಲಿ ನೊಂದು ಬೆಂದವನೊಡನೆ ತೋರಿಸಿದ ಆತ್ಮೀಯತೆ, ಇನ್ನೆಲ್ಲಿ

ತರುವುದು ಇಂತಹ ಹೆಣ್ಣನ್ನು ?

ಒಂದು ದಿನ ಆಸ್ಪತ್ರೆಯ ಹೊರ ಅಂಗಳದಲ್ಲಿ ಗಿಡದ ನೆರಳ ಕೆಳಗೆ ಅವಳೊಂದಿಗೆ ಕುಳಿತು ಮಾತನಾಡುತ್ತಿದ್ದಾಗ, ಅವಳ ಸಾಮಿಪ್ಯ ಇನ್ನೂ ಹತ್ತಿರವಾಗಬಾರದೆ? ಎನ್ನಿಸತೊಡಗಿತು. ಅವಳು ಇವನಿಗೆ ಸೋಪಿನ ನೀರಿನಲ್ಲಿ ಸ್ಪಂಜನ್ನದ್ದಿ ಮೈ ಒರೆಸುವಾಗ, ಬಟ್ಟೆ ತೊಡಿಸುವಾಗ, ನಡೆಸಿಕೊಂಡು ಹೋಗುತ್ತಿದ್ದಾಗ ಹೀಗೆ, ರೋಗಿಗೆ ಮಾಡಬೇಕಾದ ಅನೇಕ ಉಪಚಾರಗಳಲ್ಲಿ ಅವಳ ಮೈ ಇವನಿಗೆ ಸೋಕುತ್ತಿತ್ತು. ಅನೇಕರಿಗೆ ಅವಳೂ ಅದೇ ರೀತಿ ಉಪಚರಿಸುತ್ತಿದ್ದಳು. ಆದರೆ ಇವನಿಗೆ, ಸ್ತ್ರೀಯ ಸ್ನೇಹ ಅನುರಾಗಗಳನ್ನು ಕಾಣದಿದ್ದ ಇವನಿಗೆ, ಅದೇ ಬಹಳ ಕೆರಳಿಸುವುದಾಯಿತು !

ಆ ದಿನ ಸಂಜೆ-ಬಿಸಿಲಿನ ಕಾವಾರುತ್ತ ಬಂದಿದ್ದ ಆ ಸಂಜೆ ಅವಳೊಂದಿಗೆ ಹಾಗೆ ಕೂತಾಗ ಅನಿಮಿತ್ತವಾಗಿ ಅವಳ ಕೈ ಹಿಡಿದುಕೊಂಡನು. ಹಸ್ತಿದಂತಕ್ಕಿಂತಲೂ ಬಿಳಿದಾಗಿ ನಯವಾಗಿ ಅದರ ಕಾಠಿಣ್ಯವಿಲ್ಲದೆ, ಮೃದುಲ ಮಾಂಸಲವಾಗಿದ್ದ ಆ ಕೈ-ಮುಂಗೈಗಳನ್ನು ಮೆಲ್ಲನೆ ಒತ್ತಿ ಹಿಡಿದುಕೊಂಡು, ಶಿಪಾಯಿತನದ ಒರಟನ್ನು ಬಿಟ್ಟು ನಯವಾದ ದನಿಯೊಡನೆ, ತನಗಿದ್ದ ಎಲ್ಲ ಧೈರ್ಯವನ್ನು ಒಟ್ಟುಗೂಡಿಸಿ "ಲೂಸಿ! ನನ್ನ ಲೂಸಿ!" (ಕಂಠ ಉಕ್ಕಿ ಬಂದಿತು) "ನನ್ನವಳಾಗು, ನನ್ನ ಮದುವೆಯಾಗು; ಇದು ಮರುಭೂಮಿ–ಆದರೆ ನೀನಿದ್ದೀಯ; ಇದೊಂದು ಸ್ವರ್ಗ; ನೀನೆಲ್ಲಿದ್ದರೂ ಅದೊಂದು ಸ್ವರ್ಗವಾಗುವುದು; ಬಾ ನಮ್ಮ ನಾಡಿಗೆ; ನಮ್ಮ ಸುಂದರ ದೇಶಕ್ಕೆ ಹೋಗೋಣ, ಬಾ; ನಿನ್ನನ್ನು ಬಿಟ್ಟು ಇರಲಾರೆ-ಜೀವ ಹರಿದು ಹೋಗುವುದು...." ಏನೇನೊ ಗಳಹಿದನು.

ಕಾಲುಂಗರ ಕೊಳ್ಳ ಹೋದವನು ರತ್ನ ಹಾರವನ್ನು ನೋಡಿ, ತನ್ನ ದುಡ್ಡಿಗೆ ಅದನ್ನು ಕೊಡುತ್ತೀಯ? ಎಂದು ಕೇಳಿದ ಹಾಗಿತ್ತು. ಲೂಸಿ ಹೇಳಿದಳು–ಶಾಂತಳಾಗಿಯೆ ಹೇಳಿದಳು, ''ಲೆಫ್ಟಿನೆಂಟ್ ಆದಿನಾರಾಯಣ್, ನನ್ನನ್ನು ಕಂಡವರು ಅನೇಕರು, ನೀನು ಕೇಳಿದ ರೀತಿಯಲ್ಲೇ-ಮದುವೆಯಾಗು'' ಎಂದು ಒತ್ತಾಯಪಡಿಸಿದ್ದಾರೆ. ನಾನಷ್ಟೂ ಜನರನ್ನು ಮದುವೆಯಾಗಲೆ ?''

ನಗಬೇಕೆನ್ನಿಸಿತು. ಆದರೆ ಬಾಣ ಬಲು ತೀವ್ರನಾಗಿ ಎದೆನಾಟಿತು.

"ನನ್ನ ಪ್ರೀತಿ ಸಾಧಾರಣವೇ ?"

"ಪ್ರೀತಿ ಸಾಧಾರಣವಲ್ಲ; ಅದು ದಿವ್ಯವಾದದ್ದು: ಲೋಕೋತ್ತರ ವಾದದ್ದು."

"ಇಷ್ಟು ಬಲ್ಲ ನಿನಗೆ ನನ್ನ ಮದುವೆಯಾಗುವುದು ಕಷ್ಟವೆ ?"

"ಕಷ್ಟ-ನಿಜವಾಗಿಯೂ ಕಷ್ಟ. ಇದೀಗ ಯುದ್ಧ ಕಾಲ. ನಾವಿಬ್ಬರೂ ಯುದ್ಧಕಾರ್ಯದಲ್ಲಿ ತೊಡಗಿದ್ದೇವೆ. ನಾನು ಬೇರೆ ಕುಲದವಳು; ಬೇರೆ ಧರ್ಮದವಳು."

"ಆದರೇನು? ಬಹಳ ಜನ ನಮ್ಮವರು ಯುರೋಪಿಯನ್ ಹೆಂಗಸರನ್ನು ಮದುವೆಯಾಗಿದ್ದಾರೆ !"

"ನಾನು ಕ್ರಿಶ್ಚಿಯನ್, ನೀನು ಹಿಂದು"

"ಆದರೇನು ? ಬೆಂಗಳೂರಿಗೆ ಕರೆದುಕೊಂಡು ಹೋಗಿ ಆರ್ಯ ಸಮಾಜ ದಲ್ಲಿ ಶುದ್ಧಿಮಾಡಿಸುತ್ತೇನೆ. ಜಯ ದೊರೆತೊಡನೆ ನಿನ್ನನ್ನು ಕರೆದೊಯ್ದು, 'ಜಯದೊಂದಿಗೆ ಜಯವಧುವನ್ನು ಕರೆತಂದೆ!' ಎಂದು ಹೇಳಿ ನಮ್ಮವರಿಗೆಲ್ಲ ತೋರಿಸುತ್ತೇನೆ!" ಎಂದು ಕೂತಲ್ಲಿಂದಲೆ ದೇಹವನ್ನು ನಿಮಿರಿಸಿ ಮಾತ ನಾಡಿಸಿದನು

ಅವಳ ಕಣ್ಣಲ್ಲಿ ಸ್ವಲ್ಪ ಕಂಬನಿ ಮಿಡಿದಂತಾಯಿತು. "ಇಲ್ಲಿ, ವಿದೇಶದಲ್ಲಿ, ದೇಹ ಮನಸ್ಸು ದುರ್ಬಲವಾದಾಗ ನೀ ನೀರೀತಿ ಯೋಚಿಸತೊಡಗಿದೆ. ಶಾಂತ ನಾಗಿ ಆರೋಗ್ಯ ಹೊಂದಿದ ಮೇಲೆ ನಿನಗಿದೊಂದು ಭ್ರಾಂತಿ ಬಂದಿತ್ತು ಎಂದು ಗೊತ್ತಾಗುವುದು. ನಿಮ್ಮ ದೇಶದಲ್ಲಿ ಚೆಲುವೆಯರಿಗೆ ಕೊರತೆಯಿಲ್ಲ. ಕರಿಯ ಕೂದಲು, ಕರಿಯ ಕಣ್ಣುಳ್ಳ ಅನೇಕ ಜನ ಚೆಲುವೆಯರು ರೇಶಿಮೆ ಶೀರೆ ಯುಟ್ಟು, ಹಣೆಗೆ ತಿಲಕ, ಕೊರಳು ಕೈಗಳಲ್ಲಿ ಚಿನ್ನದೊಡವೆ ಇಟ್ಟು ಅತಿ ಲಾವಣ್ಯದಿಂದ ಚಲಿಸುವ ನಿಮ್ಮ ಹೆಂಗಸರನ್ನು ನೋಡಿ, 'ನಾನು ಹಾಗೇ

ಕಿಲ್ಲ ?" ಎಂದುಕೊಂಡಿದ್ದೇನೆ. ಆಯಾ ದೇಶಕ್ಕೆ ಸಹಜವಾದ ಸೌಂದರ್ಯವು ಅಲ್ಲಿನ ಜನರಲ್ಲಿದೆ. ನಿನಗೇಕೆ ಈ ಹುಚ್ಚು ?'' ಎಂದನು.

ಮುಂದುವರಿದು, ''ನಿಮ್ಮ ನಾಡಿನ ಚೆಲುವೆಯರನ್ನು, ನೀನು ಕಂಡ ಹುಡುಗಿಯರನ್ನು ನೆನೆಸಿಕೊ'' ಎಂದಳು.

ನೆನೆಸಿಕೊಂಡನು ಅವಳೆಂದಂತೆ ಕಣ್ಣು ಮುಚ್ಚಿ. ಎಲ್ಲೆಲ್ಲಿಯೂ, ಯಾರೊಬ್ಬರಲ್ಲಿಯೂ ಇವಳ ಮುಖ, ಇವಳ ಚೆಲುವು, ಇವಳ ಇರವೇ ಕಂಡು ಬಂದವು.

ಮತ್ತೆ ಇವಳ ಕೈ ಹಿಡಿದು "ಲೂಸಿ, ಇದು ವಿಧಿಯ ಸಂಕಲ್ಪ. ನಾನು ಹಿಂದುವಾಗಿ ಇದನ್ನು ನಂಬುತ್ತೇನೆ. ನಿನ್ನನ್ನುಳಿದ ಪ್ರಪಂಚ ನನಗೆ ವಿಕಾರವಾಗಿ ಕಾಣಿಸುತ್ತದೆ" ಎಂದು ಬೇಡಿದನು.

ಅವಳು ಇವನ ಹಣೆಯ ಮೇಲೆ ಕೈಯಿಟ್ಟು "ಮನಸ್ಸನ್ನು ಈ ರೀತಿ ಬಳಲಿಸಬೇಡ; ನೀನಿನ್ನೂ ಜಾಗರೂಕ ಸ್ಥಿತಿಯಲ್ಲಿರಬೇಕು" ಎಂದು ಹೇಳಿ ಕರೆದುಕೊಂಡು ಬಂದು ಹಾಸಿಗೆಯ ಮೇಲೆ ಕುಳ್ಳಿರಿಸಿದಳು.

ಅವಳು ಎರಡು ಮೂರು ದಿನ ಇವನ ಹತ್ತಿರ ಸುಳಿಯಲಿಲ್ಲ. ಇದೊಂದು ಸಿಡಿಮದ್ದು ಎಂದು ಭಾಸವಾಯಿತೇನೊ ! ಆಮೇಲೆ ಬಂದಳು.

ವಿಲಾಸದ ನಗೆ ನಕ್ಕು 'ನಿನ್ನ ಹುಚ್ಚು ಕಳೆದಿರಬೇಕಲ್ಲವೆ ?" ಎಂದಳು. ಇವನಿಗೆ ದೇಹಾರೋಗ್ಯವಿದ್ದಿದ್ದರೆ ಅವಳು ಹೆಂಗಸೆಂಬುದನ್ನೂ ಗಮನಿಸದೆ ಅವಳಿಗೆ ಏಟು ಕೊಡುತ್ತಿದ್ದನೋ ಏನೊ ? ಅಥವ ಮೈಗೆಲ್ಲ ಮುತ್ತಿಕ್ಕಿ ಬಿಡುತ್ತಿದ್ದನೊ ಏನೊ ? ಪ್ರೀತಿಯೂ ಒಂದು ಉನ್ಮಾದ !

ಆಕೆ ಇನ್ನೊಂದು ದಿನ ಪಂಚ್ ಪತ್ರಿಕೆಯನ್ನು ಹಿಡಿದುಕೊಂಡು ಬಂದು ಅದರಲ್ಲಿನ ಒಂದು ಹಾಸ್ಯವನ್ನು ತೋರಿಸಿದಳು. "ಉತ್ತರ ಆಫ್ರಿಕದಲ್ಲಿ ಮೂರು ಜನ ಭಾರತೀಯ ಸೈನಿಕರು ಅರವತ್ತು ಜನ ಇಟಾಲಿಯನ್

ಸೈನಿಕರನ್ನೂ ಹದಿನೆಂಟು ಒಂಟೆಗಳನ್ನು ಕೈಸೆರೆ ಹಿಡಿದರು. ಒಂಟೆಗಳು ಮಾತ್ರ ಅತಿ ಪ್ರಚಂಡವಾಗಿ ಕದನ ನಡೆಸಿದವು!" ಓದಿ ಇಬ್ಬರೂ ನಕ್ಕರು.

ಒಂಟೆಗಳು ಪ್ರತಿಭಟನೆ ತೋರಿದವೆ ಹೊರತು ಅರುವತ್ತು ಜನ ಇಟಾಲಿಯನ್ ಥಾಂಡಿಗರು ಹೋರಾಡಲಿಲ್ಲ, ಎಂಬ ಸಾಧಾರಣ ಅರ್ಥ.

"ಆದರೆ, 'ಯುದ್ಧ ಮಾಡಲಾಗದವರನ್ನು ಭಾರತೀಯರು ಹಿಡಿದರು,' ಎಂದೇಕೆ ಅರ್ಥ ಮಾಡಬಾರದು?" ಎಂದು ಆದಿ ಕೇಳಿದ.

"ಯು ರೀಡ್ ಟೂ ಮಚ್ ಬಿಟ್ವೀನ್ ದಿ ಲೈನ್ಸ್–ನೀನು ವ್ಯಕ್ತವಾದ ಅರ್ಥಕ್ಕಿಂತ ವಿಪರೀತ ಅರ್ಥ ಮಾಡುತ್ತೀಯ!" ಎಂದಳು.

ಆದರೆ ಅದು ಅಪ್ರಿಯವಾದ ಮಾತು; ಅಷ್ಟಕ್ಕೆ ನಿಲ್ಲಬೇಕೆಂದು ಇಬ್ಬರಿಗೂ ಮನಸ್ಸು. "ಪ್ರಪಂಚದಲ್ಲೆಲ್ಲರಿಗೂ, ಜರ್ಮನರಿಗೂ ಕೂಡ, ಭಾರತೀಯ ಸೈನಿಕರ ಶೂರತನದ ವಿಚಾರ ತಿಳಿದಿದೆ" ಎಂದು ಲೂಸಿ ಹೇಳಿದಳು.

"ನಮ್ಮ ಶೂರತನ ಬೇರೆಯವರಿಗಾಗಿ ಹೋರಾಡುವಾಗ; ನಮಗಾಗಿ ಹೋರಾಡುವಾಗ ನಮಗಿಲ್ಲದೆ ಹೋಗಿತ್ತು!"

ಇವನನ್ನು ಮಾತನಾಡಿಸುವುದೇ ತಪ್ಪೆನಿಸಿತು. ಆದರೆ ಕರುಣೆ, ದಯೆ, ಮರುಕ ಇವು ಪ್ರೀತಿಗೆ ನೆರೆಯೂರಿನಲ್ಲಿರುವ ಭಾವಗಳು. ನಗುತ್ತ ಹತ್ತಿರ ಬಂದು ಕುಳಿತು ಮಾತನಾಡುವಳು. ಎರಡು ಕುಲಗಳ ನಡುವೆ ಇದ್ದ ತಾರತಮ್ಯ ಕೂಡಲೆ ಮರೆಯಾಗುವುದು.

ಹೀಗೆಷ್ಟು ದಿನ? ಎಂದು ಕೇಳಿಕೊಳ್ಳುತ್ತಿದ್ದಾನೆ. ಕಡೆಗೂ ಒಪ್ಪದೆ ಹೋದಳಲ್ಲ! ಎಂದು ದುಃಖಪಡುತ್ತಾನೆ.

ಮತ್ತೂ ಒಂದು ದಿನ ಕೇಳಿದ.

ಅದಕ್ಕೆ ಅವಳು, "ನೀನು ಚಿಕ್ಕಂದಿನಲ್ಲಿ ಯಾವೊಬ್ಬ ಹುಡುಗಿಯನ್ನೂ ಸಂಗಾತಿಯಾಗಿ ಪ್ರೀತಿಸಲಿಲ್ಲವೆ?" ಎಂದು ಕೇಳಿದಳು.

"ಹಾಗೇಕೆ ಕೇಳುತ್ತೀಯ ?"

"ನಿಮ್ಮ ದೇಶದಲ್ಲಿ ಆ ರೀತಿ ಚಿಕ್ಕ ಹುಡುಗರು ಪ್ರೀತಿಸುವುದು ವಾಡಿಕೆ."

"ನಮ್ಮ ದೇಶದ ಬಗ್ಗೆ ನನಗೆ ತಿಳಿದಿರುವುದಕ್ಕಿಂತ ನಿನಗೆ ಹೆಚ್ಚು ಗೊತ್ತಿದೆಯಲ್ಲ !" ಎಂದ.

"ನಮ್ಮ ತಂದೆ ಸಿವಿಲ್ ಸರ್ವೀಸಿನಲ್ಲಿದ್ದರು. ನಿಮ್ಮ ದೇಶದ ಜೀವನವನ್ನು ಬಲ್ಲೆ. ನಿಮ್ಮ ದೇಶದ ಮೇಲೆ, ಅದರ ಪ್ರಾಚೀನ ಸಂಸ್ಕೃತಿ ವೈಭವಗಳ ಮೇಲೆ ನಮ್ಮ ತಂದೆಗೆ ಬಹಳ ಗೌರವ. ಹಿಂದೂ ಧರ್ಮ ಗ್ರಂಥಗಳನ್ನು ಓದಿದ್ದಾರೆ."

ಇವಳಿಷ್ಟು ಪ್ರೌಢಮತಿ ಸುಶೀಲೆ ಆಗಿರುವುದರ ಕಾರಣ ತಂದೆಯಿಂದ ಎಂಬುದು ಇವನಿಗೆ ಈಗ ಗೊತ್ತಾದಂತಾಯಿತು.

"ಹಾಗಾದರೆ ನೀನು ಮುಕ್ಕಾಲುಪಾಲು ಭಾರತೀಯಳೆ !"

"ನೀನು ವಿಶ್ವಾಸಕ್ಕೆ ಹೇಳುವ ಮಾತು ; ಅದಿರಲಿ, ನಿನಗೆ ಚಿಕ್ಕಂದಿನಲ್ಲಿ ಒಡನಾಡಿದ ಒಬ್ಬ ಹುಡುಗಿಯ ನೆನಪಿಲ್ಲವೆ ?"

"ಇಲ್ಲ–ಯಾರೂ ಇಲ್ಲ."

"ಛೀ ! ಏನು ಹಾಗೆ ಹೇಳುತ್ತೀಯ ? ನೆನೆಸಿಕೊ."

ಕೊಂಚ ಯೋಚಿಸಿದ: "ಹೂಂ, ಹೌದು ಒಬ್ಬಳಿದ್ದಳು. ಆದರೆ ನಾನಾಗ ಹುಡುಗನಲ್ಲ; ಹದಿನೆಂಟು ಇಪ್ಪತ್ತು ವರ್ಷದವನು."

"ಆ ಕಥೆ ಹೇಳು."

"ಅದು ಕಥೆಯೇನು ಅಲ್ಲ. ನನ್ನ ತಾಯಿ ಆಗ ಬದುಕಿದ್ದಳು."

"ಆಕೆಯ ಹೆಸರು ?"

"ಮುನಿಯಮ್ಮ. ನನಗೆ ಮದುವೆ ಮಾಡಬೇಕೆಂಬ ಹಂಬಲ ನನ್ನ ತಾಯಿಗೆ. ನಾನಿನ್ನೂ ಅಷ್ಟು ಚಿಕ್ಕವನು ! ನಮಗೆ ಹೆಚ್ಚಿನ ಆಸ್ತಿಯಿಲ್ಲ. ಆಗಲೆ ಮದುವೆಯಾಗುವುದೆ ? ಬೇಡವೆನ್ನುತ್ತಿದ್ದೆ. ನಮ್ಮ ತಾಯಿ ಆಗಲೆ ಹೆಣ್ಣು ನೋಡಿದ್ದಳು. ಆದರೆ ಆ ಹುಡುಗಿಯನ್ನು ನಾನೊಪ್ಪಲಿಲ್ಲ."

"ಏಕೆ? ಹುಡುಗಿ ಹೇಗಿದ್ದಳು?"

"ಎಲ್ಲರಂತೆ ಇದ್ದಳು. ವಿಕಾರವ್ಯಾವುದೂ ಇಲ್ಲ. ಮುಖದ ಮೈಯ ಮಾಟವೂ ಇತ್ತು."

"ಮತ್ತೇಕೆ ನಿನಗೆ ಅಸಮಾಧಾನ?"

"ಅವಳ ಧ್ವನಿ ಬಹಳ ಗಡಸು."

"ನನ್ನ ಧ್ವನಿ ನಿನಗೆ ಬಹಳ ಇಂಪೊ?"

"ಈಗೇತಕ್ಕೆ ಕೇಳುತ್ತೀಯ? ಆಗಲೆ ಎಲ್ಲ ಹೇಳಿದ್ದೇನೆ."

"ಅದಿರಲಿ, ಮುಂದೆ ಹೇಳು."

"ಆಗ ನಾನು ಹಟ ತೊಟ್ಟೆ; ಒಪ್ಪಲೇ ಇಲ್ಲ; ಇನ್ನೂ ಓದುವ ಹುಡುಗನಿಗೆ ಮದುವೆಯೆ? ಎಂದು ಕೂತೆ. ನನ್ನ ತಾಯಿ, 'ಹಾಗಾದರೆ ಈ ಹುಡುಗಿಯನ್ನಾದರೂ ಒಪ್ಪುವೆಯಪ್ಪೆ!' ಎಂದಳು.

"ಅದು ಯಾವ ಹುಡುಗಿ?"

"ಅದೇ ನೀನು ಕೇಳಿದ ಹುಡುಗಿ! ಅವಳ ಹೆಸರು ಇಂದುಮುಖಿ. ಅವಳ ತಂದೆ ಸ್ಕೂಲು ಮಾಸ್ಟರು. ಆಗ, ಸಂಪ್ರದಾಯದ ಹೆಸರು ಬಿಟ್ಟು ನೂತನ ಹೆಸರಿಡುವ ಕಾಲ ಬಂದಿತ್ತು."

"ಇಂದುಮುಖಿ ಎಂದರೆ ಅರ್ಥ?"

"ಚಂದ್ರನಂತೆ ಮುಖವುಳ್ಳವಳು."

"ಬ್ಯೂಟಿಫುಲ್ ನೇಮ್! (ಸುಂದರವಾದ ಹೆಸರು) ಹೆಸರಿಗೆ ತಕ್ಕ ಹಾಗೆ ಇದ್ದಿರಬೇಕು."

"ಇದ್ದಿರಬೇಕು!"

"ಏಕೆ ಇದ್ದಿರಬೇಕು, ಎನ್ನುತ್ತೀಯ?"

"ಹನ್ನೆರಡು ಹದಿಮೂರು ವರ್ಷದಮಾತು. ಅಷ್ಟು ಸ್ಫುಟವಾಗಿ ನೆನಪಿಲ್ಲ."

"ಆಕೆಗೆ ಎಷ್ಟು ವಯಸ್ಸು?"

" ಹತ್ತು ವರ್ಷವಿರಬಹುದು."

" ಅವಳು ಯಾರು ?"

" ನಮ್ಮ ಬಂಧುವೊಬ್ಬರ ಮಗಳು; ಅವರೆಲ್ಲ ಕೆಲಕಾಲ ನಮ್ಮ ಬೀದಿಯಲ್ಲಿ ಇದ್ದರು. ಆ ಹುಡುಗಿ ನಮ್ಮ ಮನೆಗೆ ಬಂದು ಹೋಗುತ್ತಿತ್ತು."

" ಆಕೆ ಹೇಗಿದ್ದಳು ? ಹೇಳು."

" ಅವಳ ಮುಖದಲ್ಲೆಲ್ಲಾ ಅತಿ ಪ್ರಭಾವಶಾಲಿಯಾಗಿದ್ದವು – ಅವಳ ಕಣ್ಣುಗಳು. ನಮ್ಮಲ್ಲಿ ಕಣ್ಣುಗಳನ್ನು ತಾವರೆ ಎಸಳು-ಬಲ್ಲೆಯಲ್ಲವೆ ಕಮಲದ ಹೂವನ್ನು? ಅವಕ್ಕೆ ಹೋಲಿಸುತ್ತಾರೆ."

" ಹೌದು, ನಿಮ್ಮ ಹೆಂಗಸರ ಕಣ್ಣುಗಳು ಬಹಳ ಸುಂದರವಾಗಿ, ಭಾವಪೂರ್ಣವಾಗಿರುತ್ತವೆ." ಯೋಚಿಸುತ್ತ ಅವಳನ್ನು ನೆನೆಸಿಕೊಂಡನು. ಹನ್ನೆರಡು ಹದಿಮೂರು ವರ್ಷಗಳ ಹಿಂದೆ ಆ ಚಲ್ಲೆಗಂಗಳ ತರಳೆಯೊಬ್ಬಳೊಂದಿಗೆ ಇವನು ಒಡನಾಡಿದುದು ನೆನಪಿಗೆ ಬಂದಿತು.

" ಅವಳ ಹಣೆಯ ಮೇಲೆ ಕುರುಳು-ಮುಂಗುರುಳು ಅಲುಗಾಡುತ್ತಿದ್ದವು. ಆಕೆಯದು ಸ್ತುರುಳಿಗೂದಲು."

" ಬಣ್ಣ ಹೇಗಿತ್ತು ?"

" ಸ್ವಲ್ಪ ಕಂದು ಬಣ್ಣ. ಆದರೆ ವಯಸ್ಸಿಗೆ ಬಂದಾಗ ಆ ಮೈಬಣ್ಣಕ್ಕೆ ಕಾಂತಿ ಬರುವುದು; ಅದು ನಮ್ಮ ಹುಡುಗಿಯರಿಗೆ ಸ್ವಾಭಾವಿಕ."

" ಆಮೇಲೆ ?"

" ಆಕೆಯ ಬಾಯಿ ಅತಿ ಮುದ್ದು. ಹಲ್ಲು ನೇರವಾಗಿದ್ದು ಹೊಳೆಯುತ್ತಿದ್ದವು. ಮಾತ.ಗಾರ್ತಿ. ಅವಳದು ಚುರುಕು ಬುದ್ಧಿ. ಅವಳನ್ನು ಅನೇಕ ತಡವೆ ಮುದ್ದಿಸಿದ್ದೆ; ಪ್ರೀತಿಸಿದ್ದೆ. ಬಲು ಜಾಣ್ಮೆಯಿಂದ ಮಾತನಾಡುತ್ತಿದ್ದಳು. ಅವಳೊಬ್ಬಳೆ ನನಗೆ ನೆನಪಿರುವ ಬಾಲ್ಯದಿನಗಳ ಗೆಳತಿ."

" ಆಮೇಲೆ, ಅವಳ ವಿಚಾರವೇನಾಯಿತು ?"

" ನಮ್ಮ ತಾಯಿ ಆ ಇಂದುಮುಖಿಯನ್ನಾದರೂ ಗೊತ್ತುಮಾಡೋಣವೇ ?" ಎಂದಿದ್ದಳು. ನಾನು' "ಅವಳಿನ್ನೂ ಚಿಕ್ಕವಳು; ನೋಡೋಣ, ಅದಕ್ಕೇನು ಅವಸರ ?" ಎಂದಿದ್ದೆ. ಅವಳ ತಂದೆಗೆ ಬೇರೆಲ್ಲಿಗೊ ವರ್ಗವಾಯಿತು. ಆಮೇಲೆ ಆ ಹುಡುಗಿಯನ್ನು ನಾನು ವಿಚಾರಿಸಿಕೊಳ್ಳಲಿಲ್ಲ."

" ಈಗವರು ಎಲ್ಲಿದ್ದಾರೆ ?"

" ತಂದೆ ಎಲ್ಲಿರುವರೊ ಗೊತ್ತಿಲ್ಲ; ಆ ಹುಡುಗಿ ಬೆಂಗಳೂರು ಕಾಲೇಜು ಒಂದರಲ್ಲಿ ಓದುತ್ತಿರಬಹುದು. ನಾನವಳನ್ನು ನೋಡಿಲ್ಲ."

" ಈಗವಳು ಚೆಲುವೆಯಾಗಿರಬಹುದಲ್ಲವೆ ?"

" ಧಾರಾಳವಾಗಿ."

" ಅವಳೀಗ ಸೀರೆಯುಟ್ಟು ದೊಡ್ಡವಳಾಗಿದ್ದರೆ ಹೇಗಿರಬಹುದು ?"

" ಏನೊ ಅವಳ ಚಿತ್ರ ನನ್ನ ಕಣ್ಣಿಗೆ ಬರುವುದಿಲ್ಲ. ನೀನು ತೆಳುವಾದ ನಸುಗೆಂಪು ಬಣ್ಣದ ಜಾರ್ಜೆಟ್ ಸೀರೆಯುಟ್ಟು, ಸೇಟಿನ್ ಜಾಕೆಟ್ ತೊಟ್ಟು, ಹಣೆಗೆ ಕೆಂಪು ತಿಲಕವಿಟ್ಟು, ತುರುಬಿಗೆ ಹೂ ಮುಡಿದಿದ್ದರೆ ಹೇಗಿರುತ್ತೀಯ ? ಎಂಬುದೇ ನನ್ನ ಕಣ್ಣಿಗೆ ಕಟ್ಟುವ ಚಿತ್ರ. ನನ್ನ ಮನಸ್ಸಿಗೆ ಇನ್ನು ಯಾವ ಹೆಂಗಸೂ ಹೊಳೆಯುಳು."

" ಆ ಇಂದುಮುಖಿ ?"

" ನೀನು ಬಹಳ ನಿರ್ದಯಿ."

" ಇವತ್ತಿಗಿಷ್ಟು ಸಾಕು," ಎಂದೆನ್ನುತ್ತ ಲೂಸಿ ಎದ್ದಳು.

ಇಷ್ಟೆಲ್ಲ ಆದರೂ, ಲೂಸಿಯ ಅಭಿಮತವೇನೂ ತಿಳಿಯಲಿಲ್ಲ ಎಂದು ಕಾತರನಾದ. ಅಂತೂ ಈಕೆ ತನ್ನನ್ನು ಮೆಚ್ಚಲಿಲ್ಲವೆಂಬ ದುಃಖ. ತಾನು ಕೆಲವು ಕಟುವಾದ ಮಾತನಾಡಿ, ತನ್ನ ಅಭಿಪ್ರಾಯವನ್ನು ಖಚಿತವಾಗಿ ತಿಳಿಸಿ

ದುದಕ್ಕೆ ಹಾಗಾಯಿತೆ? ಪ್ರಣಯದಲ್ಲಿ ವಾದವಿರಬಾರದಲ್ಲವೆ? ಆದರೆ ನಾನು ಅವಳ ದೇಶ-ಜನವನ್ನೇನೂ ನಿಂದೆ ಮಾಡಲಿಲ್ಲ; ಟೀಕಿಸಲಿಲ್ಲ. ನಮಗಾದ ಅನ್ಯಾಯ ಮಾತ್ರ ಹೇಳಿದೆ. ಯುದ್ಧದಲ್ಲಿ ಬೆಂದು, ಅದಕ್ಕಾಗಿ ಪ್ರಾಣ ಕಳೆದುಕೊಳ್ಳುವುದರಲ್ಲಿದ್ದೆ; ದೇಹವನ್ನು ಊನ ಮಾಡಿಕೊಂಡಿದ್ದೇನೆ. ಇದನ್ನೆಲ್ಲ ಅವಳರಿಯಳೆ? ಅವಳು ನನ್ನನ್ನು ದುರ್ಲಕ್ಷಿಸುತ್ತಿರುವುದು ಅಧೀನ ಜನಾಂಗಕ್ಕೆ, ದಾಸ ಕುಲಕ್ಕೆ ಸೇರಿದವನೆಂದೊ? ಅದೂ ಇರಬಹುದು! ತನ್ನ ದೇಶದಲ್ಲಿ ಒಂದೇ ಒಂದು ಜಾತಿ ಉಳಿದೆಲ್ಲ ಜಾತಿಗಳ ಮೇಲೆ ಎಂತಹ ಅಧಿಕಾರ ನಡೆಸುತ್ತಿದೆ! ಆ ಅಧಿಕಾರವನ್ನು ಅವರಿಗೆ ಯಾರೂ ಕೊಡಲಿಲ್ಲ; ಆ ಜಾತಿ ಸಂಪಾದಿಸಲಿಲ್ಲ. ಹೀಗಿದ್ದೂ, ಸ್ವಯಂ ಪರಾಕ್ರಮದಿಂದ ಭಾರತವನ್ನು ಗೆದ್ದ ಆ ಕುಲಕ್ಕೆ, ಅದನ್ನು ಆಳುತ್ತಿರುವ ಕುಲಕ್ಕೆ ಸೇರಿದವಳು, ತನ್ನ ಪ್ರಣಯವು ಎಷ್ಟು ಪ್ರಗಾಢವಾಗಿದ್ದರೂ ತನ್ನನ್ನು ಹೇಗೆ ಸೇರಿಕೊಂಡಾಳು? ತಮ್ಮ ದೇಶದಲ್ಲಿ, ಕರಿಯರ ತೌರೂರಾದ ದೇಶದಲ್ಲಿ ಬಿಳಿಯ ತೊಗಲ ಬಣ್ಣಕ್ಕಾಗಿ ಅಷ್ಟೊಂದು ಹೆಗ್ಗಳಿಕೆಯಿರುವಾಗ, ಅಚ್ಚ ಶ್ವೇತ ವರ್ಣೀಯಳು ಕಂದು ಬಣ್ಣದವನನ್ನು ಒಲಿದಾಳೆ? ಹೀಗೆಂದು ತಾನೆ ವಾದ ಮಾಡಿಕೊಳ್ಳುವನು.

ಆದರೆ ಪ್ರೇಮವು ವಾದ ವಿಚಾರವನ್ನು ಮೀರಿದುದು. ವಾದ ವಿಚಾರದಿಂದ ಯಾರೂ ಪ್ರೇಮವನ್ನು ಕಳೆದುಕೊಳ್ಳಲಿಲ್ಲ.

ಪ್ರೇಮಿಗಳ ಮನಃ ಸಂಕಟ ಅತಿ ದಾರುಣ!

ಒಂದು ದಿನ ಆದಿನಾರಾಯಣ ಇವಳನ್ನು ಕೇಳಿದನು--''ನನ್ನ ಅಹವಾಲು ಪುನರ್ ವಿಮರ್ಶೆಯಾದೀತೆ? (ವಿಲ್ ಮೈ ಹಂಬಲ್ ಪಿಟಿಷನ್ ಬಿ ರಿಕನ್ಸಿಡರ್ಡ್?)"

''ಸಂಜೆ ಇದಕ್ಕೆ ಉತ್ತರ ಹೇಳುತ್ತೇನೆ'' ಎಂದಳು ಲೂಸಿ ಬ್ರೈನ್.

ಸಂಜೆ ಅದೇ ಸ್ಥಳದಲ್ಲಿ-ಇವನು ಎಂದು ಮೊದಲ ದಿನ ಅವಳನ್ನು ಕೈ ಹಿಡಿದು ಕೇಳಿದ್ದನೊ ಅಲ್ಲಿಯೇ ಇಬ್ಬರೂ ಕುಳಿತಿದ್ದರು. ಅವಳು ಆ ಮಾತು ಮಾತಈು ಎತ್ತಿ, ಸ್ವಾಭಾವಿಕವಾಗಿಯೆ ಇದ್ದು, ಒಂದು ಬಿಂಬ ಚಿತ್ರ ತೋರಿ

ಸುತ್ತ, ''ಇದು ನನ್ನ ಭಾವೀ ಪತಿಯದು ; ಆತನೀಗ ವಿಮಾನ ಪಡೆಯಲ್ಲಿ ಇದ್ದಾನೆ !'' ಎಂದಳು.

ಅವಳು ಸಹಜವಾಗಿ ಹೇಳಿದಳು.

ನ್ಯಾಯಾಧಿಪತಿ ಆಸನದ ಮೇಲೆ ಕುಳಿತು-ಅಪರಾಧಿಗೆ-"ನಿನಗೆ ಆಮರ ಣಾಂತ ಶಿಕ್ಷೆ!" ಎಂದು ಹೇಳಿದಂತೆ ಆಯಿತು.

ಈತ, ವಿಂಗ್ ಕಮ್ಯಾಂಡರ್ ರಾಬರ್ಟ್ ಡೇವಿಡ್‌ಸ್, ನೂರು ಜನ ರಾಮೆಲ್ಲರಿಗಿಂತ ಭಯಂಕರನಾಗಿ ಕಂಡನು ಆದಿನಾರಾಯಣನ ಕಣ್ಣಿಗೆ.

ವಿಮಾನ ಪಡೆಯ ಭವ್ಯ ಸಮವಸ್ತ್ರ ಧರಿಸಿ, ತನ್ನ ಪಡೆಯ ಸಂಕೇತ ಎಡ ಎದೆಯನ್ನಲಂಕರಿಸಿರಲು ನಗುಮುಖದಿಂದ ನಿಂತಿದ್ದಾನೆ ಈ ವಿಮಾನ ದಳದ ಅಧಿಕಾರಿ. ಎಳೆಯ ಮುಖವೇನೊ ಎಂದು ತೋರುತ್ತಿದೆ. ಸಣ್ಣ ಎಳೆಯಂತೆ ಹಾಯ್ದ ಮಿಾಸೆ, ಗೆರೆಯೋಪಾದಿ ಮೇಲ್ತುಟಿಯ ಮೇಲೆ ಮೂಡಿದೆ. ಅದೇ ಆ ಜಾತಿಯ ನೀಲ ಕಣ್ಣುಗಳು, ಕಾಗದದ ರಟ್ಟಿನಂತೆ ಕಾಣುವ ತೆಳುವು ಮೂಗು, ತೃಪ್ತನಾಗಿ ಸುಖಿಯಾಗಿರುವ ಮನೋಭಾವ ಇಂತಹ ಸೌಂದರ್ಯ ಶಾಲಿ, ಸುಖೀ ಪುರುಷನೊಂದಿಗೆ ತನ್ನನ್ನು ಹೋಲಿಸಿಕೊಂಡ ನಮ್ಮ ಆದಿ ನಾರಾಯಣ. ವಿದೇಶೀ, ಸಾಧಾರಣನಾದೊಬ್ಬ ಲೆಫ್ಟಿನೆಂಟ್, ಯುದ್ಧದಲ್ಲಿ ಸೋತು ಗಾಯಗೊಂಡವನು, ತಾನು-ಇವನಿಗೆ-ಈ ಭವ್ಯಾಕೃತಿಯ ದಳನಾಯ ಕನಿಗೆ ದಿವಾರಾತ್ರಿ ಸಮುದ್ರೋಲ್ಲಂಘನ ಮಾಡಿ, ಹಿಟ್ಲರನ ದೇಶಕೋಶ, ಕೋಟೆ ಕೊತ್ತಲ, ಕಾರ್ಯಾಲಯ-ಕಾರ್ಖಾನೆಗಳನ್ನು ಧೂಳೀಪಟಮಾಡಿ, ವ್ಯೋಮ ಗರ್ಭದಲ್ಲಿ ಗೋರಿಂಗನ ಭಯಂಕಶ ಅಸ್ತ್ರಸಾಧನಗಳೊಂದಿಗೆ ಕನಲಿ ಹೋರುವ ಈ ವೀರನಿಗೆ ತಾನು ಸಾಟಿಯೆ? ಎಂದುಕೊಂಡ. ಬಹು ದುಃಖ ವೆನಿಸಿತು. ತಾನೇಕೆ ಈ ಎಟುಕಲಾರದ ಹಣ್ಣಿಗೆ ಹಾರಿಹಾರಿ ಬಿದ್ದೆ ?

ಆದರೆ ತಾನೂ ಸಿಪಾಯಿ ! ವೀರಾಗ್ರಣಿ ರಾಮೆಲ್ಲನೊಂದಿಗೆ ಸೆಣಸಿ ದವನು. ಸೋಲನ್ನು ಒಪ್ಪಿಕೊಂಡಾನೇ?

"ಲೂಸಿ! ಆತ ಎಲ್ಲಿಯೋ ಇದ್ದಾನೆ. ಇದರಲ್ಲಿ, ಈ ಯುದ್ಧದಲ್ಲಿ ಸತ್ತವರಾರೊ? ಬದುಕಿದವರಾರೊ? ಇದು, ಎಷ್ಟು ದಿನಗಳಪರ್ಯಂತ ನಡೆಯುವುದೊ ಈ ಘೋರ ಹೋರಾಟ. ಯೌವನ, ರೂಪ, ಆಶೆ-ಇವೆಲ್ಲ ಸಕಾಲದಲ್ಲಿ ತೃಪ್ತಿ-ಸಾಫಲ್ಯ ಪಡೆಯಬೇಕು. ರೂಪ, ಯೌವನ, ಉದ್ವೇಗ ಎಲ್ಲ ಕಾಲ ಕಳೆದಂತೆ ಮಾಸಿಹೋಗುವುವಲ್ಲವೇ? ಆತನೆಲ್ಲಿಯೊ ಇದ್ದಾನೆ! ನಾನಿಲ್ಲಿದ್ದೇನೆ; ನಿನ್ನ ಬಳಿ ಇದ್ದೇನೆ. ನಿನ್ನ ಮನವೊಪ್ಪದೆ?"

"ರೂಪ, ಯೌವನ ಮಾಸೀತು! ಆದರೆ ಪ್ರೇಮ ಮಾಸದು. ಅವನೆಲ್ಲಿಯೊ ಇದ್ದಾನೆ; ನಿಜ. ಆದರೆ ಸದಾ ನನ್ನ ಮನಸ್ಸಿನಲ್ಲಿದ್ದಾನೆ. ನಾನು ಅವನ ಮನಸ್ಸಿನಲ್ಲೆ ಸದಾ ಇದ್ದೇನೆ. ನನಗೆ ಕಾಗದ ಬರೆಯುತ್ತಾನೆ-'ಲೂಸಿ! ಸಮುದ್ರ ದಾಟಿ ಶತ್ರು ನಾಡನ್ನು ಭೇದಿಸುವಾಗ ಆ ರಾತ್ರಿಚಳಿ ನನ್ನ ಎಲುಬುಗಳನ್ನು ಅಲುಗಿಸುತ್ತದೆ. ಹಲ್ಲು ಕಡಕಡಕಡ ಕಡಿಯುತ್ತದೆ ಬಾಯಲ್ಲಿ ಚೂಯಿಂಗ್‌ಗಮ್ ಇದ್ದರೂ. ಆದರೆ ಮನಸ್ಸು ನಿನ್ನನ್ನೆ ನೆನೆಯುತ್ತದೆ! ಯಾವ ನಿಮಿಷಕ್ಕೆ ಮರಣ ಬಂದೀತೊ?-ಮರಣಕ್ಕೆ ನಾನು ಭೀತನಲ್ಲ!-ಮೃತ್ಯುವನ್ನು ಎದುರಿಸುವಾಗ, ಶತ್ರು ವಿಮಾನವನ್ನು ಸಂಧಿಸುವಾಗ, ನಿನ್ನ ಹೆಸರು ಹೇಳಿ ಯುದ್ಧ ನಡೆಸುತ್ತೇನೆ; ಆಗ ವಿನ್‌ಸ್ಟನ್ನನ ಹೆಸರು ನೆನಪಿಗೆ ಬರುವುದಿಲ್ಲ!' ಹೀಗೆ ಬರೆಯುತ್ತಾನೆ.

"ನಾವೀಯುದ್ಧವನ್ನು ಏತಕ್ಕೆ ನಡೆಸಿದ್ದೇವೆ ಗೊತ್ತೆ? ಯಾರು ಏನಾದರೂ ಟೀಕೆ ವ್ಯಾಖ್ಯಾನ ಮಾಡಬಹುದು; ಈ ಯುದ್ಧ ಕೇವಲ ನಮ್ಮ ಉಳಿವಿಗಾಗಿ. ಅದೇ ರೀತಿ ವಿನ್‌ಸ್ಟನ್-ಪ್ರೀಮಿಯರ್ ಹೇಳಲಿಲ್ಲವೆ? 'ಫಾರ್ ಅವರ್ ಸರ್ವೈವಲ್.' ನಮ್ಮ ಸೈನಿಕರು ಯುದ್ಧಕ್ಕೆ ಹೋಗಿದ್ದಾರೆ-ತಮ್ಮ ಹೆಂಡಿರು ಮಕ್ಕಳಿಗೆ ಕ್ಷೇಮವಾಗಲೆಂದು-ಅವರ ಮಾನ ಸಂರಕ್ಷಣೆ ಆಗಲೆಂದು. ನಾನೂ ನನ್ನವನನ್ನು ಯುದ್ಧಕ್ಕೆ ಕಳಿಸಿದ್ದೇನೆ. ಅವನಿಗಾಗಿ ನಾನು ನಿಷ್ಠೆ, ಪ್ರೇಮ, ಪ್ರೇಮಶೀಲಗಳನ್ನು ತೋರಿಸದಿದ್ದರೆ, ಅದು ಧರ್ಮವಾದೀತೆ? ಆ ನಿಷ್ಠೆ, ಆ ಆದರ್ಶ ಇಲ್ಲದೆ ಹೋದರೆ ಜಯದಲ್ಲಿ ಭರವಸೆ ಬಂದೀತೆ? ಜಯದಲ್ಲಿ ಭರವಸೆಯಿಲ್ಲದೆ ಜಯಪ್ರಾಪ್ತಿ ಸಾಧ್ಯವೆ?

"ಆದ್ದರಿಂದಲೇ ನಾನು ನಿನಗೆ ಇದನ್ನು ತಡೆದು ಹೇಳಿದೆ. ನಿನ್ನ ಸ್ಥಿತಿ ಅವನ ಹಾಗಿದ್ದಿದ್ದರೆ ಆಗ ನಿನಗೆಷ್ಟು ಸಂಕಟವಾಗುತ್ತಿತ್ತು? ಅದೆಂಥ ನನ್ನ ದ್ರೋಹವಾಗುತ್ತಿತ್ತು !

"ನಿಮ್ಮ ಜನ ದೈವವನ್ನು ಬಹಳ ನಂಬುತ್ತಾರೆ. ಆದರೆ ಅದೇ ದೈವ ನೀನು ಮೊದಲು ನನ್ನ ಕಣ್ಣಿಗೆ ಬೀಳದಂತೆ ಮಾಡಿದೆ.... ..."

"ಓ, ಲೂಸಿ !" ಎಂದೆದ್ದು ಅವಳನ್ನು ತಬ್ಬಿಕೊಳ್ಳಲು ಹೋದ. ಹತ್ತಿರ ಬಂದು ಕುಳ್ಳಿರಿಸಿ "ಏನು ಹೀಗಾಡುತ್ತೀಯ ?" ಎಂದು ಗದರಿಸಿದಳು.

ಗದರಿಸಿಕೊಂಡ ಹುಡುಗನಂತೆ ಸುಮ್ಮನೆ ಕುಳಿತ.

ಮತ್ತೂ ಹೇಳಿದಳು, "ರಜ ತೆಗೆದುಕೊ; ನಿನ್ನ ದೇಶಕ್ಕೆ ಹೋಗು; ಆ ಇಂದುಮುಖಿಯನ್ನು ಮದುವೆಯಾಗು. ಯುದ್ಧ ಮುಗಿಯಲಿ, ನಾನೂ ರಾಬರ್ಟ್ ಸೇರಿ ಒಂದು ಸಾರಿ ಬೆಂಗಳೂರಿಗೆ ಬರುತ್ತೇವೆ."

ಆದಿನಾರಾಯಣ ಕೆಲವು ತಿಂಗಳಲ್ಲಿ ಎದ್ದು ಓಡಾಡುವಂತಾದ. ರಜ ದೊರೆಯಿತು. ಭಾರತಕ್ಕೆ ಹೊರಟನು.

ಹೊರಡುವ ದಿನ ಅವಳು ಮೆಟ್ಟಲಿಳಿದು ಕಳಿಸಬಂದಳು. ಅವಳ ಕೈಯನ್ನು ಎರಡು ಕೈಗಳಿಂದಲೂ ಹಿಡಿದು, ಶಾಂತವಾಗಿರುವ ಕೊಳದಲ್ಲಿ ಕಳೆದ ರತ್ನವನ್ನು ಹುಡುಕುವಂತೆ ತೀವ್ರ ದೃಷ್ಟಿಯಿಂದ ಅವಳ ಕಣ್ಣನ್ನು ನೋಡಿದ. ಅವು ಎಂದಿನಂತೆ ಇದ್ದವು. ಅವಳ ಕೈಯನ್ನೆತ್ತಿ ತುಟಿಗೊತ್ತಿಕೊಂಡ. ಪಳ ಪಳನೆ ಕಣ್ಣ ಬಿಸಿಹನಿ ಅವಳ ಕೈಯನ್ನು ಒದ್ದೆ ಮಾಡಿದವು.

ಇವನ ಭುಜದ ಮೇಲೆ ಆಕೆ ಕೈಯಿಟ್ಟು, "ನನ್ನನ್ನು ಮರೆತುಬಿಡು; ಆ ಹುಡುಗಿಯನ್ನು ಮದುವೆ ಆಗು" ಎಂದು ಹೇಳಿದಳು.

"ನಿನ್ನನ್ನು ಮರೆಯಲಾರೆ; ನನ್ನ ದೇಶಕ್ಕೆ ಹೋಗುತ್ತೇನೆ. ಮುಂದೆ ಹೇಗೊ ?"

ಮೆಲ್ಲನೊಂದು ಬಾರಿ ಇವನ ಕೆನ್ನೆ ಸವರಿ "ಗುಡ್ ಬಯ್ ! ಗುಡ್ ಲಕ್!" ಎಂದಳು. ಇವನು ಹಾಗೆಯೇ ನಿಂತಿದ್ದ.

ತಿರುಗಿದವಳು ಪುನಃ ಬಂದು, ಇವನ ಹಣೆಗೊಂದು ಮುತ್ತನಿತ್ತು ಹೋಟು ಹೋದಳು.

ಹೋಟು ಹೋದಳು.

ಆದಿನಾರಾಯಣ ಹಿಂದೂಸ್ಥಾನಕ್ಕೆ ಹೊರಟ.

ರಾತ್ರಿಯ ಹೊತ್ತು ದೀಪಗಳೆಲ್ಲೂ ಇಲ್ಲ. ಆದರೆ ಚಂದ್ರನ ಬೆಳಕಿದೆ. ಚಂದ್ರನಿಗೆ ಬ್ಲ್ಯಾಕ್‌ಔಟ್ ಮಾಡಲಾದೀತೆ ? ಹಡಗು ನಿಶ್ಶಬ್ದವಾಗಿ ಹೋಗುತ್ತಿದೆ. ಹಡಗಿನ ಡೆಕ್ ಮೇಲೆ ನಿಂತು, ಕಟ ಕಟೆ ಹಿಡಿದುಕೊಂಡು ತೀರವನ್ನೇ ನೋಡುತ್ತಿದ್ದಾನೆ.

ಯುದ್ಧ ! ಸೋಲು ! ಗಾಯ ! ಪ್ರಣಯ ! ಅಂತೂ ಅವಳು ದೊರೆಯಲಿಲ್ಲ ! ಹಡಗಿನಿಂದ ಹಾರಿಕೊಂಡು ಬಿಡಲೆ ? ಎನ್ನಿಸಿತು. ಜರ್ಮನ್ ಯು ಬೋಟ್ ಬಂದು ಟಾರ್ಪೆಡೊ ಹೊಡೆಯಬಾರದೆ? ಎನ್ನಿಸಿತು.

ಎದೆಗೆ ಗುಂಡಿಟ್ಟುಕೊಳ್ಳಲೆ? ಎನ್ನಿಸಿತು. ಹೀಗೆಲ್ಲ ಆಯಿತು.

"ಅಯ್ಯೊ ! ಅವಳನ್ನು ಹೇಗೆ ಮರೆಯಲಿ ?" ಎಂದ. ಸುಮ್ಮನಾದ. ಚಂದ್ರನನ್ನು ನೋಡಿದ; ಅಲೆಗಳಲ್ಲಿ ವಿಲಕ್ಷಣ ರೀತಿ ಪ್ರತಿಬಿಂಬಿತವಾಗಿ ಹೊಳೆಯುವುದನ್ನು ನೋಡಿದ.

ಈಗೊಂದು ವೇಳೆ ಅವಳು ತನ್ನೊಂದಿಗೆ ಹೀಗೆ ಇದೇ ಹಡಗಿನಲ್ಲಿ ಪ್ರಯಾಣ ಬೆಳೆಸಿದ್ದರೆ? ಅದು ಎಂತಹ ಸುಖ! ಆ ಪ್ರೇಯಸಿಯ ಬಳಿ ನಿಂತು ಹಾಗೆಯೇ ಇದೇತಾಣದಲ್ಲಿ ಚಂದ್ರನನ್ನು ನೋಡುತ್ತಿದ್ದರೆ? ಕರಿಯ ನೀರಿನ ಮೇಲೆ ಹೊಳೆವ ಚಂದ್ರ ಪ್ರಕಾಶವನ್ನು ಕಂಡಿದ್ದರೆ?........ಅಯ್ಯೊ ಹುಚ್ಚ! ಭ್ರಮಿಸಿಕೊಂಡ. ಭ್ರಮೆಗೆ ದುಃಖಪಟ್ಟ. ದುಃಖಪಡುವುದೊಂದೆ! ಅವಳ ತುಟಿ ಹಣೆಗೆ ಸೋಂಕಿದುದು ಇನ್ನು ಸೋಂಕಿದಂತೆಯೇ ಇತ್ತು. ಏನೋ

ಭ್ರಮೆಯಿಂದ ಅಲ್ಲಿ ಮುಟ್ಟಿ ನೋಡಿಕೊಂಡ. ಅವಳು ಉಪಯೋಗಿಸುತ್ತಿದ್ದ ಪರಿಮಳ-ಅದರ ವಾಸನೆ ಇನ್ನು ಇತ್ತು. ಮೂಗಿಗೆ ಬರುತ್ತಿದ್ದಂತೆ ಭಾಸವಾಗುತ್ತಿತ್ತು. ಅವಳ ಇಡೀ ರೂಪ, ಅವಳ ಸರ್ವಗುಣ ವಿಶಿಷ್ಟವಾದ ವ್ಯಕ್ತಿ ರೂಪ ಅಳಿಸಲಾಗದೆ ಮೂಡಿತ್ತು.

ತನ್ನ ದುಃಖವನ್ನು ಹಾಡಿಕೊಳ್ಳಬೇಕೆಂದನು. ಮನಸ್ಸು ಹುಡುಕಾಡಿತು ಹಾಡುಗಳಿಗಾಗಿ. ಒಂದೂ ಹೊಳೆಯಬಾರದೆ ?

ಬೊಂಬಾಯಿಯನ್ನು ತಲುಪಿತು. ಅಲ್ಲಿಂದ ಬೆಂಗಳೂರಿಗೆ ಬಂದ. ಬಂಧುಗಳನ್ನು ನೋಡಿಕೊಂಡ. ಅಲ್ಲಲ್ಲಿ ಅಲೆದ. ಸರ್ಕಾರದ ಆಸ್ಪತ್ರೆಗೆ ಹೋಗಿ ತನ್ನ ಎದೆ ತೋರಿಸಿದ. ಉಳಿದ ವೈದ್ಯರ ಸಲಹೆ ಕೇಳಿದ. "ನಿನ್ನ ದೇಹಸ್ಥಿತಿ ಸಮರ್ಪಕವಿಲ್ಲ'' ಎಂದರು. ಕೆಲಸಕ್ಕೆ ರಾಜೀನಾಮೆ ಬರೆದು ಕಳಿಸಿದ. ಪತ್ರವ್ಯವಹಾರ ನಡೆಯತೊಡಗಿತು.

ಏನು ಮಾಡಬೇಕು ? ಸುಮ್ಮನೆ ಅಲೆದ; ಸುತ್ತಿದ; ಸಿನೀಮ ನೋಡಿದ. ಪರಿಚಯದವರು ಕಂಡರೂ ಗುರುತು ಕಾಣದವನಂತೆ ಇದ್ದುಬಿಟ್ಟ. ಎಲ್ಲಿಯ ಗ್ರಹಚಾರ? ಮಾತು, ಮಾತಿಗೆ ಮಾತು; ಏನೇನಾದರೂ ಹೇಳಬೇಕಾದೀತು; ಎಲ್ಲಿ ಏನು ಮಾತನಾಡಿದರೂ ಕಷ್ಟ. ಆದ್ದರಿಂದ ಅದನ್ನು ಹಚ್ಚಿಕೊಳ್ಳುವುದೇ ಬೇಡ.

ಆದರೂ ತಾನು ಒಂಟಿಯಾಗಿದ್ದಾನೆ. ಒಂಟಿ ಜೀವನ ಬಲು ಬೇಸರ; ಮುಂದುವರಿಸಲು ಬಲು ಕಷ್ಟ.

ಅವಳು ಹೇಳಿದ್ದಳು–ಇಂದುಮುಖಿಯನ್ನು ನೋಡು, ಎಂದು. ಅವಳೆಲ್ಲಿದ್ದಾಳೆ! ಏತಕ್ಕೆ ನೋಡಬೇಕು? ಎಂದುಕೊಳ್ಳುವನು. ಒಬ್ಬರನ್ನು ನೋಡಿ ಇನ್ನೊಬ್ಬರನ್ನು ಮರೆಯಲಿಕ್ಕಾದೀತೆ? ಆದರೂ ನೋಡೋಣ, ಎಂದುಕೊಂಡ. ನೋಡಿದರೆ ಬಾಧಕವಿಲ್ಲ ಲಾಭವೋ? ಅದರಲ್ಲಿ ಹೆಚ್ಚು ನಂಬಿಕೆಯಿಲ್ಲ.

ಅದರೆ, ಪ್ರೇಮ ವಾಸನೆಯಿಂದ ಕೆರಳಿದ್ದ ಮನಸ್ಸು ಇವನಿಗರಿವಾಗ

ದಂತೆ ಈ ಹೊಸಬಳನ್ನು ಕುರಿತು ಯೋಚಿಸಿತು. ಮುಸಕುಮುಸಕಾಗಿದ್ದ ಅವಳ ಚಿತ್ರ ಪ್ರಯತ್ನದಿಂದ, ಒಂದೊಂದು ವೇಳೆ, ಯೌವನೆಯಾದ ಹುಡುಗಿಯಾಗಿ, ಕಾಣಿಸಿಕೊಳ್ಳುವುದು. ಮುದ್ದಾಗಿದ್ದ ಆ ಎಳೆಯ ಬಾಲಕಿ ಚಲುವೆಯಾದ ಹೆಣ್ಣಾಗಿ ಕಾಣಿಸಿದಳು. ಆಗಿದ್ದ ಮುಖ ಲಕ್ಷಣಗಳು ವಯೋಪೂರ್ಣವಾದಾಗ ರೂಪ ಹೀನವಾಗಲು ಏನೊಂದೂ ಕಾರಣವಿರಲಿಲ್ಲ. ಅದು ಪ್ರಕೃತಿಗೆ ವಿರೋಧವೂ ಆಗಿರಲಿಲ್ಲ. ಅಂತೂ ಕಾಣದ ಕನ್ನೆಯೊಬ್ಬಳು ಮನಸ್ಸಿನ ಚಿತ್ರ ಭಿತ್ತಿಯಮೇಲೆ ಆಕಾರಗೊಂಡಳು.

ಅತಿಶ್ರಮದಿಂದ ಅವಳಿರುವ ಸ್ಥಳ ಪತ್ತೆಯಾಯಿತು. ಅವಳನ್ನು ನೋಡಬೇಕೆನ್ನಿಸಿತು. ಅವಳಿದ್ದ ಕಾಲೇಜನ್ನು ಹುಡುಕಿಕೊಂಡು ಹೊರಟ. ತನ್ನ ಮಿಲಿಟರಿ ಪೋಷಾಕಿನಲ್ಲಿ ಹೋಗುವುದೆ? ಇಂಡಿಯದಲ್ಲಿ ಈ ಮಿಲಿಟರಿ ಉಡಿಗೆ ಕಂಡರೆ ಜನರಿಗೆ ಅನಾದರ. ಅಷ್ಟೇ ಅಲ್ಲ, ಹೆಂಗಸರಿಗೆ ಭಯ. ಶಾಕುಂತಲದ ಆ ರಾಜನ ಮಾತು ನೆನಪಿಗೆ ಬಂದಿತು–ಆಶ್ರಮವನ್ನು ಪ್ರವೇಶಿಸುವಾಗ ಸೌಮ್ಯ ವೇಷದಿಂದ ಹೋಗಬೇಕೆಂಬುದು. ಆದ್ದರಿಂದ ಈ ಮಹಿಳಾಶ್ರಮಕ್ಕೆ ಹೋಗುವಾಗಲೂ ಸೌಮ್ಯ ವೇಷದಿಂದಲೆ ಹೋಗೋಣ ಎಂದುಕೊಂಡ.

ಹಿಂದೆ, ಇವರು ಆಫ್ರಿಕಕ್ಕೆ ಹೋಗುವ ಮೊದಲು, ಜ್ವಾಲಾಸಿಂಗ್-ಇವನ ರೆಜಿಮೆಂಟಿನಲ್ಲಿದ್ದವನು ತನ್ನ ಫೌಜೀ ಡೌಲನ್ನು ತೋರಿಸಲು, ಕಾಲೇಜಿನಲ್ಲಿ ತನ್ನ ಜೊತೆಗೆ ಓದುತ್ತಿದ್ದ ಹುಡುಗಿಯ ಮನೆಗೆ ಮೋಟಾರು ಗಾಡಿಯಲ್ಲಿ ನಾಲ್ಕಾರು ಜನ ಶಿಪಾಯಿಗಳು–ಆರ್ಡರ್ಲಿಗಳ ಸಮೇತ ಹೋದಾಗ ಅವನಿಗೆ ಆದ ಸತ್ಕಾರ ಎಲ್ಲರಿಗೂ ಗೊತ್ತಿತ್ತು. ಬೀದಿಯಲ್ಲಿ ಹೆಂಗಸರು ಹುಡುಗರೆಲ್ಲ ಬಾಗಿಲು ಹಾಕಿಕೊಂಡರಂತೆ. ಒಬ್ಬರೂ ಈಚೆಗೆ ಬಂದು ಲೀಲಾ ಪವಾರಳ ಮನೆ ತೋರಿಸಲೆ ಇಲ್ಲವಂತೆ. ಅಲೆದೂ ಅಲೆದೂ ಸುತ್ತಿದರು. ಯಾರೋ ಒಬ್ಬ ಸರ್ಕಾರಿ ಅಧಿಕಾರಿ 'ಅದಿರಬಹುದು!' ಎಂದು ಮನೆ ತೋರಿಸಿ ಇವರನ್ನೆಲ್ಲ ದುರುಗುಟ್ಟಿಕೊಂಡು ನೋಡಿದನಂತೆ. ಲೀಲಾ ಪವಾರಳೂ ಕೂಡ, ಇವನ ಪತ್ತೆ ಹತ್ತಿದರೂ ಭಯುಗೊಂಡು ಸರಿಯಾಗಿ ಮಾತನಾಡಿಸದೆ, ಕೊನೆ

ಗೊಂದು ಕಪ್ ಚಾ ಕೂಡ ಕುಡಿಯಲು ಕೊಡದೆ ರವಾನಿಸಿದ್ದೂ, ರೆಜಿಮೆಂಟ್ ಮೆಸ್‌ನಲ್ಲಿ ಆ ಕಥೆ ಎಲ್ಲರ ಬಾಯಲ್ಲಿ ಬಂದದ್ದೂ ಇವನಿಗೆ ಮರೆತಿರಲಿಲ್ಲ.

ತಾನು ಅಂತಹ ತಪ್ಪನ್ನು ಮಾಡಬಾರದು. ಲಕ್ಷಣವಾದ ಸೂಟ್ ಹಾಕಿ, ನಯವಾಗಿ ತಲೆ ಬಾಚಿ, ಮುಖದ ಸಾಧನಗಳನ್ನು ಲೇಪಿಸಿಕೊಂಡು ಹೊರಟ. ದೀರ್ಘಕಾಲದ ಶಿಪಾಯಿತನದಿಂದ ಬಂದ ಧೀರವಾದ ನಡಿಗೆ, ಬೆಳೆದ ಮೈಕಟ್ಟು, ಕೊಂಚ ಎತ್ತರದ ನಿಲುವು, ತೆಳುವಾದ ಮೀಸೆ, ಸ್ಥಿರವಾದ ನೋಟ, ಹೊಳೆವ ಹುಬ್ಬುಗಳು, ಕೊಂಚ ಚಿಂತಾಮಯವಾದ ಮುಖ ಭಾವ-ಲೂಸಿಯು, ದೈವವು ಮೊದಲು ಅವಳ ಕಣ್ಣಿಗೆ ಈತ ಬೀಳದಂತೆ ಮಾಡಿತು, ಎಂದು ಹೇಳಿದುದರಲ್ಲಿ ಆಶ್ಚರ್ಯವಿಲ್ಲ! ಬೀದಿಯಲ್ಲಿ ಹೋಗುವಾಗ ಜನರ ಗಮನವನ್ನು ಸೆಳೆಯಬಲ್ಲ ವ್ಯಕ್ತಿತ್ವ ಅವನಿಗಿದೆ.

ಅಂಜಿಕೊಂಡೇ ಕಾಲೇಜ್ ಪ್ರಾಕಾರದ ಹೆಬ್ಬಾಗಿಲನ್ನು ದಾಟಿದ. ಒಳಗಡೆ ಅದೊಂದು ನಾರೀ ಲೋಕ! ನೂರಾರು ಜನ ಹೆಂಗಸರು-ಸ್ವತಂತ್ರ ವಾತಾವರಣದಲ್ಲಿರುವ ಹೆಂಗಸರು. ಇದು, ಈ ಪುರುಷ ಮೃಗ ಏಕೆ ಬಂದಿತು? ಎಂದು ನೋಡುವಂತೆ ನೋಡುತ್ತಿದ್ದರು ಆ ಹುಡುಗಿಯರು. ಅವರ ಕಿಲಕಿಲ ನಗು, ಅವರ ನೋಟ ಇವನನ್ನು ಬೆದರಿಸಿದವು. ಹಿಟ್ಲರ್ ರಾಮೆಲ್ಲರ ಪ್ಯಾನ್ಜರ್ ಪಡೆಗಳನ್ನು ನೋಡಿದ್ದ; ಎದುರಿಸಿ ಹೋರಿದ್ದ. ಆದರೆ ಈ ರಮಣಿಯರ ಪ್ಯಾನ್ಜರ್ ಪಡೆ ನೋಡಿ ಎದೆ ಬೆದರಿತು. ಇದೆಲ್ಲಿಯ ಫಜೀತಿ! ಹಿಮ್ಮೆಟ್ಟೋಣ, ಎನ್ನಿಸಿತು ಆ ಕುತೂಹಲ ನೋಟಗಳ ತೀವ್ರತೆಯನ್ನು ತಾಳಲಾಗದೆ.

ಅಲ್ಲಿ ಯಾರನ್ನು ಕೇಳುವುದು? ಅವರನ್ನು ಮಾತನಾಡಿಸಿದರೆ ಎಲ್ಲಿ ಸಿಡಿಮದ್ದು ಹಾರಿದ ಹಾಗಾದೀತೋ? ಎಂಬ ಭಯ ಇವನಿಗೆ. ಆ ಹುಡುಗಿ ಇದ್ದಾಳೆಯೊ, ಇಲ್ಲವೊ? ಎಲ್ಲಿ ಅಪಹಾಸ್ಯಮಾಡಿ ನಕ್ಕುಬಿಡುವುವೊ ಈ ಹೆಣ್ಣುಗಳು?

ಹುಡುಗಿಯರನ್ನು ಕೇಳುವ ಗೋಜೇ ಬೇಡ, ಎಂದು ಒಳಕ್ಕೆ ಹೋದ.

ಅಲ್ಲಲ್ಲಿ ಹುಡುಕಿ ಆಫೀಸನ್ನು ಪತ್ತೆ ಹಚ್ಚಿದ. ಅಲ್ಲಿ ಹೋಗಿ, "ಇಂದು ಮುಖಿಯನ್ನು ನೋಡಬಂದಿದ್ದೇನೆ" ಎಂದು ತಿಳಿಸಿದ.

ಅಲ್ಲಿನವರು "ಯಾವ ಇಂದುಮುಖಿ?" ಎಂದರು. ಇಂದುಮುಖಿಯರು ಬಹಳ ಜನ ಇದ್ದರೇನೊ? ಅಥವ ಕವಿಸಮಯದಂತೆ ಎಲ್ಲ ನಾರಿಯರೂ ಇಂದುಮುಖಿಯರೆ! ಇವನ ಇಂದುಮುಖಿಯನ್ನು ಯಾರು ಹುಡುಕುವವರು? ತೊದಲಿಸಿದ; ಯಾವುದಾವುದೋ ಪರಿಚಯ ಹೇಳಿದ. ಏನೋ, ಅಂತೂ ಹೇಗೂ ಸುತ್ತಿ, ಬಳಸಿ, ತಾನರಸಬಂದಿದ್ದ ಇಂದುಮುಖಿ ಬೇಕೆಂದ.

"ಕರೆಸುತ್ತೇವೆ; ಕೂಡಿ" ಎಂದರು. ಯಾರೊ ಒಬ್ಬ ಹೋದ ಕರೆಯಲು.

ಹನ್ನೆರಡು ಹದಿಮೂರು ವರ್ಷದ ಮಾತು—ಅವಳಿಗೆ ನೆನಪಿದೆಯೊ ಇಲ್ಲವೊ? ಆಗ ಅವಳು ಚಿಕ್ಕ ಹುಡುಗಿ. ಈಗ, "ನೀವ್ಯಾರು? ನಿಮ್ಮ ಪರಿಚಯ ನನಗಿಲ್ಲ" ಎಂದರೆ ಅಪಮಾನವಾದೀತು? ಈ ನಮ್ಮ ದೇಶದ ಹೆಂಗಸರು ಪರಿಚಯವಿದ್ದರೂ, ಅದೇಕೊ ಪರಿಚಯವಿಲ್ಲದವರಂತೆ ನಟಿಸುತ್ತಾರೆ. ಬೀದಿಯಲ್ಲಿ ಅವರನ್ನು ಕಂಡರೆ ಮಾತನಾಡಿಸುವುದಕ್ಕಾಗದು. ಗುರುತು ಹತ್ತಿದರೂ ಇವನಾರೊ? ಎಂಬಂತೆ ನಟಿಸುತ್ತಾರೆ; ಮಾತನಾಡಿಸಿದರೆ ಹೇಗೋ ಮಾತನಾಡಿ, ಜೊತೆಯವರೊಂದಿಗೆ "ಅದ್ಯಾರೊ? ನನಗೆ ಬೇರೆ ಪರಿಚಯವಿಲ್ಲ" ಎಂದು ಕೇಳಿಸುವಂತೆ ಹೇಳಿಕೊಂಡು ಹೋಗುತ್ತಾರೆ. ಒಂದೊಂದು ವೇಳೆ "ಈತ, ನನಗೆ ಸುತರಾಂ ಗೊತ್ತಿಲ್ಲ; ಆದರೂ ಮಾತನಾಡಿಸ ಬಂದ! ಎದೆಗಾರಿಕೆ ಎಷ್ಟು?" ಎನ್ನುವ ಹಾಗೆ ಸಿಡಿದು ಮುನಿದು ಹೋಗುತ್ತಾರೆ. ಮಾನಹೋದರೂ ಹೋದೀತು. ಇದೆಲ್ಲಿಯ ಗ್ರಹಚಾರ! ಆದರೆ ಆ ಇಂಗ್ಲಿಷ್ ಹುಡುಗಿಯರು? ಸೌಜನ್ಯವು ಅವರ ಹುಟ್ಟು ಗುಣ. ಅವರ ಬಗೆಯೆ ಬೇರೆ!

ಆಳು ಬಂದವನು, "ನನಗೆ ಸಿಕ್ಕಲಿಲ್ಲ" ಎಂದ. ಯಾರೊ, "ಕ್ಯಾಂಟೀನಿನಲ್ಲಿರಬಹುದು; ಅಲ್ಲಿ ನೋಡು" ಎಂದರು. ಅವನು ಅಲ್ಲಿಗೆ ಹೋದ.

ಕ್ಯಾಂಟೀನ್ ಎಂದೊಡನೆ ಇವನ ಜೀವನ ನೆನಪಿಗೆ ಬಂದು, ತಾನು

ಬರುವಾಗ ಇವರ ಕ್ಯಾಂಟೀನ್ ಹತ್ತಿರವೇ ಹಾದುಬಂದುದನ್ನೂ ಅದರಲ್ಲಿ ನಡೆಯುತ್ತಿದ್ದ ಗಲಭೆಯನ್ನೂ ಹೋಲಿಸಿಕೊಂಡ.

ಇಂದುಮುಖಿ ಬರಲಿ ಮನಸ್ಸು ಏನೇನೋ ಯೋಚಿಸಿತು. "ತನ್ನ ಪರಿಚಯ ಏನೆಂದು ಹೇಳುವುದು ?" "ಏನೋ ಹೇಳುವುದು ?" "ಅವಳಿಗೀಗ ಮದುವೆಯಾಗಿದ್ದರೆ ?" ಫಕ್ಕನೆ ಹೊಳೆಯಿತು ಈ ಯೋಚನೆ. ಇದು ಮನಸ್ಸನ್ನು ಬೆದರಿಸಿತು.

ಅವಳು, ಆ ಹೆಸರಿನವಳು ಬಂದಳು. ಬಿಳಿ ಸೀರೆಯುಟ್ಟಿದ್ದಾಳೆ. ಮೈ ಕೊಂಚ ಸ್ಥೂಲವಾಗುತ್ತ ಬಂದಿದೆ. ಕಿವಿಗೆ ಲೋಲಾಕಿದೆ. ಕಣ್ಣಿಗೆ ದಪ್ಪ ಕನ್ನಡಕ, ಅದರ ಹಿಂದೆ ಕಣ್ಣುಗುಡ್ಡೆ ಕೊಂಚ ಮುಂದೆಬಂದು ಕಾಣಿಸುತ್ತಿವೆ. ತಲೆಯ ಕೂದಲು ಹೇಗೊ ಹಾದು ಬೈತಲೆಯ ಅಂಕೆಗೆ ಸಿಕ್ಕದಂತಿದೆ. ಕಪೋಲ ಕೈಗಳ ಮೇಲೆ ಕೂದಲು ಎದ್ದಿವೆ. ಹಣೆಯ ಮೇಲೆ ಮಡಿವೆಗಳ ಗುರುತು. ಇವಳು ತಾನು ಹಿಂದೆ ಕಂಡ ಆ ಮುದ್ದು ಸೂಸಿದ, ಕಮಲದಲನಯನದ, ಸುರುಳಿಗೂದಲ, ಮೃದುಮೈಯ, ಗಿಳಿಮಾತಿನ 'ಇಂದು'ವಲ್ಲ! ಇದು ಯಾವುದು ಈ ಹೆಣ್ಣು ?

ಆದರೆ ಬಂದಿದ್ದೇನೆ ಮಾತನಾಡಿಸಲು; ಉಪಚಾರಕ್ಕಾದರೂ ಮಾತನಾಡಿ ಹೋಗೋಣ, ಎಂದುಕೊಂಡು, "ನಮಸ್ಕಾರ" ಹೇಳಿದನು.

ಆ ಹುಡುಗಿ ಹೆದರಿಬಿಟ್ಟಿದ್ದಳು. ಅತಿ ಸಂಕೋಚ ಹೆದರಿಕೆಗಳಿಂದ 'ನಮಸ್ತೆ' ಎಂದಳು. ಆಫೀಸಿನವರೆಲ್ಲ ಇವರನ್ನೆ ನೋಡುತ್ತಿದ್ದರು.

"ನಾನು–ಆದಿನಾರಾಯಣ."

ಹುಡುಗಿ, ಗುರುತು ಹತ್ತದಿದ್ದವಳಂತೆ ನೋಡಿದಳು.

"ದುಮ್ಮಲೂರು ರಂಗಪ್ಪನವರ ಮಗ. ಕುಂಚಟಿಗರ ಬೀದೀಲಿ ಬಹಳ ದಿನದ ಹಿಂದೆ ನೀವೆಲ್ಲ ಇದ್ರಿ; ನಮ್ಮ ಮನೆಗೆ ಬರುತ್ತಿದ್ದಿರಿ. ನಿಮ್ಮ ತಂದೆ ರಾಜಪ್ಪನವರು ನಮಗೆ ಬಂಧುಗಳು."

ಹುಡುಗಿ ಉಸಿರೆಳೆದು, "ಹೂಂ! ಹೌದು! ಹೌದು, ಈಗ ಕೊಂಚ ಕೊಂಚ ನೆನಪಾಯಿತು" ಎಂದಳು.

"ನಿಮ್ಮ ತಂದೆ ಎಲ್ಲಿದ್ದಾರೆ?"

"ಚಿಕ್ಕಮಗಳೂರಲ್ಲಿದ್ದಾರೆ. ನೀವಿಲ್ಲೇ ಇದ್ದೀರೇನು?"

"ಇಲ್ಲ, ರಜದ ಮೇಲೆ ಬಂದಿದ್ದೇನೆ."

"ನೀವು ಯಾವ ಕೆಲಸದಲ್ಲಿದ್ದೀರಿ?"

"ಮಿಲಿಟರಿಯಲ್ಲಿದ್ದೇನೆ; ಮಿಡ್ ಈಸ್ಟ್‌ನಲ್ಲಿದ್ದೆ."

ಹುಡುಗಿ ಇವನ ಮುಖ ನೋಡಿದಳು. ಇವನು ಕೊಂಚ ನಕ್ಕ.

"ಚೆನ್ನಾಗಿದ್ದೀಯೇನಮ್ಮ? ನಿನ್ನ ನೋಡಿ ಬಹಳ ದಿನವಾಯಿತು."

"ಹೌದು ಬಹಳ ದಿನವಾಯಿತು. ಚೆನ್ನಾಗಿದ್ದೇನೆ. ಭಾನುವಾರ ಹಾಸ್ಟಲಿಗೆ ಬನ್ನಿ, ಅಲ್ಲಿ ಮಾತಾಡೋಣ" ಎಂದಳು.

ಹೊರಕ್ಕೆ ಬಂದು, "ಅಯ್ಯೋ ವಿಧಿಯೇ!" ಎಂದು ನಿಟುಸಿರಿಟ್ಟ.

ದಲ ದಲ ಸಮೇತ ಆವಳಿ, ತಿಳಿಯಾದ ಶ್ವೇತಾರುಣ ಬಣ್ಣದಿಂದ ಕೂಡಿ, ಚಂದ್ರನ ಸುತ್ತುವರಿದಿರುವ ಪರಿವೇಷದಂತೆ ತನ್ನ ಪರಿಮಳವನ್ನು ಸುತ್ತಲೂ ಹರಡಿ, ಚೆಲುವು ಭೋಗಗಳಿಗೆ ಸಾಧನವಾಗಿರುವ ಗುಲಾಬಿಯೊಂದಿಗೆ, ಕಾಗದದ ಹೂವಿನಂತೆ ರಸ-ರೂಪ-ಪರಿಮಳ ವಿಹೀನವಾದ ಡೇರೆ ಹೂವು ಸಮನಾದೀತೆ?

ಕೀಳಾದುದು ತೋರುವ ಪುರಸ್ಕಾರಕ್ಕಿಂತ ಉನ್ನತವಾದುದು ತೋರುವ ತಿರಸ್ಕಾರ ಮೇಲಾದದ್ದು, ಎಂದು ನಮ್ಮ ಪ್ರಖ್ಯಾತ ಕವಿಯೊಬ್ಬನು ಹೇಳಿದ್ದಾನೆ. ಆ ಕವಿಯು ರೋಷ ಸಂಕಟಗಳಿಂದ ಆ ರೀತಿ ಹೇಳಿದನೆ?

ದೈವ ಈಗಲೂ ಮೋಸಮಾಡಿತು!

ಈ ಹುಡುಗಿ ಹೀಗೇಕೆ ಆಗಿದ್ದಾಳೆ? ಎಂದು ಆಶ್ಚರ್ಯಪಟ್ಟ. ನಾರಿ, ಹದಿನಾರು ತುಂಬಿದ ನಾರಿ, ಅಪ್ಸರೆಯಂತೆ ಕಾಣುತ್ತಾಳಂತೆ ಒಬ್ಬ ಸುಭಾಷಿತ

ಕಾರನ ಕಣ್ಣಿಗೆ. ಆದರೆ ಈಗ, ಕತ್ತೆಯ ಮರಿ ದೊಡ್ಡದಾದ ಮೇಲೆ ಕಾಣುವ ರೂಪು ಬಂದಿದ್ದೆಯಲ್ಲ! ಇಂಗ್ಲಿಷರ ಆ ಬಾಲಕವಿ-ಎ ಥಿಂಗ್ ಆಫ್ ಬ್ಯೂಟಿ ಈಸ್ ಎ ಜಾಯ್ ಫಾರ್ ಎವರ್–ಸುಂದರ ವಸ್ತು ಸದಾ ಹರ್ಷಕಾರಿ ಎಂದು ಹೇಳಿದ ಮಾತು ಲೋಕಾನುಭವ ಸಾಲದೆ ಕವಿತಾ ಹರ್ಷದ ಉತ್ಕರ್ಷದಲ್ಲಿ ಹೇಳಿದ ಮಾತೊ? ಅಥವ ಕವಿ ಕನಸು ಕಂಡ ಸುಂದರವಸ್ತು ಇಂದು ಸುಂದರ ವಿರದಿರಬಹುದು. ಆದರೆ ಅಂದಿನ ಸೌಂದರ್ಯಾನುಭವ-ಅದು ಚಿರಸುಖದಾಯಿ, ಎಂಬ ಭಾವದಿಂದ ಬರೆದನೊ?

ಇದೂ ನಿಜವಿರಬಹುದು - ಸುಂದರ ವಸ್ತು ಸದಾ ಸುಂದರವಾಗಿದ್ದು ತನ್ನ ಸೌಂದರ್ಯದಿಂದ ಸದಾ ಹರ್ಷವನ್ನು ಬೀರದೆ ಇರಬಹುದು.

ಲೂಸಿ! ಕವಿ ಇಂಥ ರೂಪವನ್ನೆ ಕಂಡು ಹಾಗೆ ಹೇಳಿರಬೇಕು. ಅವನಿಗಿಂತ ಇನ್ನೂ ಪರಿಣತನಾದ ವರ್ಡ್ಸ್‌ವರ್ತ್ ಬರೆದ "ಷಿ ವಾಸ್ ಎ ಫ್ಯಾಂಟಂ ಆಫ್ ಡಿಲೈಟ್!" ಎಂಬ ಮಾತು ಇಂಥವಳನ್ನು ಕುರಿತು ಹೇಳಿದುದೆ ಆಗಿರಬೇಕು!

ಆದರೆ ಇವರೆಲ್ಲ ಸುಖ ಪುಲಕಿತರಾಗಿ ಈ ರೀತಿ ಹೇಳಿದರು.

ತನ್ನ ಅನುಭವ ಸುಖವೊ? ದುಃಖವೊ? ಸುಖ ದುಃಖಗಳನ್ನು ಕೂಡಿದುದೊ? ಇಲ್ಲವೆ ಮೀರಿದುದೊ? ಇದು ಏನು? ತಾನೆ ಕೇಳಿಕೊಂಡ. ವಿವರ ಭಾಸವಾಗಲಿಲ್ಲ.

ಜೀವನದ ದಾರಿ ನೆಟ್ಟಗಾಗಲಿಲ್ಲ! ಅವಳನ್ನು ಮರೆಯುವುದು ಸಾಧ್ಯವಿಲ್ಲ!

ತನ್ನ ಸರ್ವ ಚೇತನಕ್ಕೂ ಪ್ರೀತಳಾಗಿದ್ದ ಆ ಪ್ರೇಯಸಿಯನ್ನು, ಜೀವ ಪುತ್ಥಳಿಯನ್ನು ತಾನು ಹೇಗೆ ಮರೆಯಬಲ್ಲೆ? ಎಂದುಕೊಂಡ. ಅನೇಕ ಸಹಸ್ರ ಮೈಲಿಗಳ ಅಂತರವನ್ನು ಮೀರಿ ಅವಳ ದಿವ್ಯ ರೂಪು ತಟ್ಟನೆ ಮನಃ

ಪಟಲದ ಮೇಲೆ ಬಂದು ನಿಂತಿತು. ಆಕೆ ಯಾವ ದೇಶದಲ್ಲೇ ಇರಲಿ, ಬಹು ಸುಂದರಿಯೆಂದು ಪರಿಣಿತಳಾಗುವಳು. ದೇವಕನ್ನೆಗೆ-ರಾಜ ಸಂಭವೆಗೆ ಇರ ಬಹುದಾದ ಉನ್ನತ ನಿಲುವು ; ಗರ್ವಿಷ್ಟವಾಗಿ, ಪೂರ್ಣವಾಗಿ, ಸುಖಸೀವೋ ನ್ನತಿಯಿಂದ ಬೆಳೆದಿರುವ ಎದೆ, ಬಾಹುದ್ವಯಗಳು; ಅಹ! ಆ ಕೊರಳ ನುಣ್ಪನ್ನು ಹೇಗೆ ಹೊಗಳುವುದು! ಗ್ರೀಕರ-ರೋಮನರ ಮತ್ತೊಂದೊಂದುಬಾರಿ. ಕನ್ನಡದ ಹೊಯ್ಸಳರ ಶಿಲಾ ಪ್ರತಿಮೆಗಳಲ್ಲಿ ಅವಳಂತಹ ರೂಪ ಇಳಿದಿರು ತ್ತದೆ. ಆಕೆಯ ಹಣೆ ವಿಶಾಲವಾದರೆ ವಿಕಾರ, ಕುಂಚಿತವಾದರೆ ಕುಂದು ಎಂಬಂತಿತ್ತು. ಅದು ಸ್ವಚ್ಛ ಧವಳ ಕಾಂತಿಯಿಂದ ನಸು ಉಬ್ಬಿ, ತುಸುಬಾಗಿ ಮುಖದ ಸೌಂದರ್ಯಕ್ಕೆ ಪ್ರಭಾವಳಿಯ ಹಾಗಿತ್ತು. ತಲೆಯ ಕೂದಲು ಕೊಂಚ ಕರಿಯ ಬಣ್ಣದಿಂದ ಕೂಡಿ, ತಲೆಗೊಂದು ಭೂಷಣ ವೇಷವಾಗಿ, ನೂತನ ಅಲಂಕಾರ ವಿಧಾನದಿಂದ ಮೆರೆದಿತ್ತು. ಚಿತ್ರಗಾರನ ರೇಖಾ ವಿನ್ಯಾಸವೆ ವಿಲಾಸಗೊಂಡು ಬಗೆಗೊಂಡಂತೆ ತೆಳುವಾಗಿ, ನಯವಾಗಿ ಬಾಗಿದ ಆ ಹುಬ್ಬು ಅದರ ಕೂದಲು ಹೊಳೆವ ರೀತಿ, ಅದರ ಕೆಳಗೆ ಸ್ವಚ್ಛ ನೀಲ ಶೀತಲೋದಕ ದಲ್ಲಿ ಬಿದ್ದ ಬಿಂದುವೊಂದು ಅಗಲವಾದಂತೆ ತೋರುವ ಕಣ್ಣು, ಆ ನಾರ್ಡಿಕ್ ಜಾತಿಯವರಿಗಿರುವ ತೆಳುವಾದ-ನೀಳವಾದ ಮೂಗು, ಇಷ್ಟು ಸಾಲವೆ ಅವ ಳನ್ನು ರೂಪವತಿ, ಅತೀವ ರೂಪವತಿ ಎಂದು ಹೇಳಲು ?

ಸ್ತ್ರೀಯನ್ನು ಯಾವುದರಿಂದ ಸುಂದರಿ ಎಂದು ನಿರ್ಧರಿಸುತ್ತಾರೆ, ಎಂಬುದಕ್ಕೆ, ಆಕೆಯ ತುಟಿಗಳಿಂದ ಎಂದು ಹೇಳುವವರೂ ಉಂಟು. ಅವರ ಈ ರೂಪ ನಿರ್ದೇಶ ಬಹಳ ಮಾಡಿ ತಪ್ಪಾಗಿರಲಿಕ್ಕಿಲ್ಲ. ಮೋಹ, ಪ್ರಣಯ, ರತಿ, ವಿಲಾಸ-ಎಲ್ಲವನ್ನೂ ಆಕರ್ಷಿಸಿ ಕಟ್ಟಬಲ್ಲ ರೂಪ ಆ ಅಧರಗಳಲ್ಲಿದೆ. ಲೂಸಿ ಅದರಲ್ಲಿಯೂ ಪರಮ ಭಾಗ್ಯವತಿಯಾಗಿದ್ದಳು. ಚಿಕ್ಕದಾಗಿ ಶಿಲ್ಪರೇಖಾ ವಿನ್ಯಾಸದಿಂದ ಕಡೆದಂತೆ, ಕೆತ್ತಿ ಕೊರೆದಂತೆ, ಹೃದಯವನ್ನು ಘಾತಿಸುವ ಮದನನ ಪುಟ್ಟ ಬಿಲ್ಲಿನಂತೆ ಇರುವ ರಂಗಿನ ಮೇಲ್ತುಟಿ; ಅದಕ್ಕೆ ಇಂಬಾಗಿ, ಅದರ ರೂಪ ರುಚಿರಕ್ಕೆ ಹೊಯಿಕೈಯಾಗಿ, ಯಮಳನಂತೆ ಅಲ್ಲ-ಸಹಜೀವಿ ಯಾದ ಪ್ರಿಯನಂತೆ ಅಪ್ಪಿರುವ-ಒಪ್ಪಿರುವ ಕೆಳದುಟಿ; ಇವು ರಾಗಪೂರ್ಣ ವಾಗಿ, ಸ್ನೇಹಮಯವಾಗಿ, ಎದೆಯ ಒಳಗಣ ಮಾತನ್ನು ತಮ್ಮ ಮೂಲಕ

ಹೊರಕ್ಕೆ ಬಿಡುತ್ತಿದ್ದಾಗ ಅದನ್ನು ಅರಿತ ಆದಿನಾರಾಯಣ ತನ್ನ ಚಿತ್ತವನ್ನು ಹೇಗೆ ಸರಿಯಾಗಿ ಇಟ್ಟುಕೊಂಡಿದ್ದಾನು?

ಕೊಂಚ ರಾಗಾಲಂಕೃತವಾಗಿ. ಕೋಮಲವಾಗಿ, ಶುಭ್ರ ಶ್ವೇತ ವರ್ಣದಿಂದ ಅಗಲವಾಗಿದ್ದು ಬರುತ್ತ ಕಿರಿದಾಗಿ ಗದ್ದದಲ್ಲಿ ಮುಕ್ತಾಯಗೊಂಡ ಕೆನ್ನೆಗಳನ್ನು, ಮುಖದ ಚೆಲುವಿಗೆ ಎಲ್ಲೆಕಟ್ಟಿದ ಕೆನ್ನೆಗಳನ್ನು ಹೇಗೆ ಮರೆಯಲಾದೀತು?

ಅವಳ ಕೈ. ಅವಳ ಬೆರಳುಗಳು. ಅವಳ ಉಗುರು–ಅವಕ್ಕಾಗಿದ್ದ ರೂಪ ಲೇಪನ-ಅವುಗಳ ಮೂಲಕ ಇವನಿಗೆ ಪ್ರಾಪ್ತವಾಗಿದ್ದ ಸ್ಪರ್ಶ, ಸೇವೆ. ಮಮತೆ ಯಾವ ಮನುಷ್ಯನು ನೆನೆಯದಿದ್ದಾನು?

ಆದರೇನು? ಆ ರೂಪ, ಆ ಇಂಪು. ಆ ನಿಲುವು, ಆ ನೆನಪು ಬಂದು ಕುಣಿಕುಣಿದು ಹೋದರೇನು?

ತಾನು ಶಿಪಾಯಿ ಎಂಬುದು ಮಾತ್ರ ನಿಜವೆನಿಸಿತು. ತನಗೆ ಅದೇಗತಿ! ಈ ಮಾತಿನ ಸತ್ಯ ಹೊಳೆಯಿತೊ ಇಲ್ಲವೊ ನಿರ್ಧರಿಸಿಯೆ ಬಿಟ್ಟ.

ರಜ ರದ್ದುಮಾಡಿಸಿಕೊಂಡ. ರಾಜೀನಾಮೆ ಹಿಂದಕ್ಕೆ ತೆಗೆದುಕೊಂಡ.

ಜಪಾನರು ಭಾರತದ ಗಡಿಯೊಳಕ್ಕೆ ಬಂದರು. ಆದೀಗ ತನ್ನ ಯುದ್ಧ ಭೂಮಿ. ಜಂಗಲ್ ಯುದ್ಧದಲ್ಲಿ ಶಿಕ್ಷಣವಾಯಿತು. ತನ್ನ ಒಡಂಕಿನ ಸಮಸ್ಯೆಗೆ ಉತ್ತರ, ಅಲ್ಲಿ. ನಿಂಕಾದೋಷಿನ ಶಿಪಾಯಿಯೊಡಿಗೆ ಹೋರುವಾಗ ದೊರೆತೀತು ಎಂದುಕೊಂಡ. ಅನಾರೋಗ್ಯದ ಪ್ರಶ್ನೆಯೆ ಏಳಲಿಲ್ಲ.

ಕೋಹಿಮಾರಂಗ! ಇವನ ಅಧೀನದಲ್ಲಿ ಈಗ ಸಿಕ್ಕರ ಪಡೆಯೊಂದಿದೆ. ಇವನೀಗ ಕ್ಯಾಪ್ಟನ್. ಆಕ್ರಮಣಕ್ಕೆ ಆಜ್ಞೆ—ಅದಿನ್ನೂ ಹೊರಕ್ಕೆ ಬಿದ್ದಿಲ್ಲ—ಇದ್ದರೂ ಅದು ಕೆಳದರ್ಜೆಯವರಿಗೆ ಗೊತ್ತಾಗಬಾರದು. ಆದರೆ ಅದ ಸುಳಿವು ಇವರಿಗೆ ಇದೆ. ನಾಳೆ ಆಕ್ರಮಣ ನಡೆಸಬೇಕಾದೀತು, ಘನ ಘೋರ ಕಾಳಗವಾದೀತು!

ಇವನ ಲೆಫ್ಟಿನೆಂಟ್, ಕರ್ತಾರ ಸಿಂಗ್ ಜೊತೆಗಿದ್ದಾನೆ. ಆತನೊಂದಿಗೆ: " ಸಿಂಗ್! ಸಾವು ಜೀವನದ ಮುಕ್ತಾಯವಲ್ಲವೆ?"

" ಇರಬೇಕು. ಅದನ್ನೇಕೆ ಈಗ ಯೋಚಿಸಿಕೊಳ್ಳುತ್ತೀರಿ?"

"ಯೋಚಿಸಿಕೊಳ್ಳದೆ ಏನು? ಸಾವಿನ ದವಡೆಯಲ್ಲಿ ನಿಂತಿದ್ದೇವೆ; ವಿಷದ ಗಾಳಿಯಂತೆ ಅದು ನಮ್ಮನ್ನು ಸುತ್ತುವರಿದಿದೆ. ಅದರ ಯೋಚನೆ ಸಹಜವೆ! ಬದುಕಿನ ಎಲ್ಲ ಹೋರಾಟಕ್ಕೂ ಸಾವೇ ಮುಕ್ತಾಯ ಎಂದು ತೋರುತ್ತದೆ.''

''ನೀವೇಕೆ ಹೀಗಿದ್ದೀರಿ ಕ್ಯಾಪ್ಟನ್? ನೋಡೋಣ, ಇವರನ್ನು ಹುರಿದು ಪುಡಿ ಮಾಡಿಬಿಡೋಣ!''

ಅನ್ಯಚಿಂತನಾಗಿದ್ದ ಕ್ಯಾಪ್ಟನ್ ತನ್ನ ಮನಸ್ಸಿನಲ್ಲೇ ''ಇದೊಂದು ಬಾರಿ ತಾನವಳನ್ನು ನೋಡಿದ್ದರೆ-?'' ಎಂದು ಬಗೆದುಕೊಂಡ.

ಮಾರನೆ ದಿನ ಬಂದಿತು. ಮಿತ್ರಸೇನೆ ಆಕ್ರಮಣ ನಡೆಸಿತು. ಸ್ತಬ್ಧವಾಗಿದ್ದ ಕಾನನ, ಗಿರಿ, ಕಂದರಗಳು ಒಂದೇ ಬಾರಿಗೆ ರಣರಂಗದ ಘನಘೋರ ಧ್ವನಿಯಿಂದ ಕಂಪಿತವಾಗತೊಡಗಿದವು. ಅದೆಷ್ಟು ಬಗೆಯ ಧ್ವನಿ! ಅದೆಷ್ಟು ಬಗೆಯ ಅಬ್ಬರ! ಅದೆಷ್ಟು ಬಗೆಯ ಸಿಡಿತ! ಅದೆಷ್ಟು ಬಗೆಯ ಗರ್ಜನ!

ಚೀತ್ಕಾರ, ಮರಣ ಸಂಕಟ, ವೀರ ಘೋಷ, ಉತ್ಸಾಹದಬ್ಬರ, ಉಕ್ಕು ಮದ್ದುಗಳ ಕರ್ಕಶ ಕಠೋರ ರವದಲ್ಲಿ ಮಾನವ ಧ್ವನಿಯೂ ಬೆರತಿತ್ತು! ಜೈ ಜೈಕಾರಗಳಲ್ಲಿ ಅದೆಷ್ಟು ವಿಧ! ಜೈ! ಶ್ರೀ ಗುರು ವಾಘ್! ಎಂಬ ಸಿಕ್ಕರ ಘೋಷ, ಜೈ! ಪಶುಪತಿನಾಥ್! ಎಂಬ ಘೂರ್ಕರ ಉಚ್ಚರವ, ಮಹಾರಾಷ್ಟ್ರರ ಚಿರಪರಿಚಿತವಾದ ಹರಹರ ಮಹಾದೇವ್! ಎಂಬ ಭಯಾವಹ ಗರ್ಜನ, ಇತ್ಯಾದಿಗಳು ಕೇಳಿ ಬರುವುದರ ಜೊತೆಗೆ, ಅಲ್ಲಲ್ಲಿ ಬಾನ್ಝಾಯ್! ಎಂಬ ಶತ್ರು ಸಿಘೋರ್ಷವೂ ಕೇಳುವುದು.

ಮರದಲ್ಲಿ ಅಡಗಿ ಕುಳಿತ ಜಪಾನಿಗಳನ್ನು ಪತ್ತೆ ಹಚ್ಚಿ ಸುಟ್ಟು ಉರುಳಿಸಿ

ದುದಾಯಿತು. ಗುಂಡಿಗಳಲ್ಲಿ ಅಡಗಿದವರನ್ನು ಹೊಡೆದೆಳೆದುದಾಯಿತು. ನೆಲಮಾಳಿಗೆಗಳಲ್ಲಿ ತಂಗಿ ಅಲ್ಲಿಂದ ಕದನ ನಡೆಸುತ್ತಿದ್ದವರನ್ನು ತಿವಿದು ಕೊಂದು ಉಚ್ಚಾಟನ ಮಾಡಿದುದಾಯಿತು. ನೂರೆಂಟು ಕಡೆಗಳಲ್ಲಿ, ನೂರೊಂದು ಸ್ಥಾನಗಳಲ್ಲಿ ಭದ್ರರಾಗಿದ್ದ ಜಪಾನಿಗಳನ್ನು ಮರ್ದನ ಮಾಡಿಯಾಯಿತು.

ಸಮುದ್ರದ ತೆರೆ ಹೊರಳಿದಂತೆ ಮಿತ್ರವಾಹಿನಿ ಹೊರಳಿ ಕೊಚ್ಚಿಕೊಂಡು ಬಂದಿತು. ಆದರೆ ಒಂದೆಡೆ ತೆರೆ ಹೊರಳಿದ್ದರೆ ಇನ್ನೊಂದೆಡೆ ಅದು ಹಿಂಜಾರುವುದೂ ಉಂಟು. ಜಪಾನಿಗಳು ಇನ್ನೊಂದು ಕಡೆ ಅಕ್ರಮಣ ನಡೆಸಿ ಮುನ್ನುಗ್ಗಿ ವೀರಘೋಷ ಮಾಡಿದರು. ಎಲ್ಲಿಯೋ ಒಂದು ಕಡೆ "ವಂದೇ ಮಾತರಮ್! ಜೈ ಹಿಂದ್!" ಎಂಬ ಮೈ ಜುಮ್ಮೆನಿಸುವ ಘೋಷ ಕೇಳಿಸಿದವು. ಹಿಂದೂ ಸೈನಿಕರು ಸ್ತಬ್ಧರಾಗಿ ಅತ್ತಕಡೆ ಆಲಿಸಿದರು. ಆ ಹೆಮ್ಮೆ-ಶೋಕ-ಅಪಮಾನ ಇವುಗಳನ್ನೆಲ್ಲ ಒಳಗೊಂಡ ಆ ಘೋಷ ಕೇಳಿಸಿದುದು ನಿಜವೊ ಭ್ರಮೆಯೊ ಇವರಿಗೆ ತಿಳಿಯಲಿಲ್ಲ.

ಆದಿನಾರಾಯಣನ ಮನಸ್ಸು ಹೊಯ್ದಾಡಿತು. ಆದರೆ ಮನಸ್ಸನ್ನು ಹೊಯ್ದಾಡಲು ಅವಕಾಶ ಕೊಡಕೂಡದು. ಇವನ ಗುರಿಯೊಂದೇ ಒಂದು. ಅದು............!

ಕೈಯ ಸಿಡಿಗುಂಡುಗಳನ್ನು ಎರಚಿಕೊಂಡು ಹೋದ; ತನ್ನವರನ್ನು ಕೈಬೀಸಿ ಕರೆದ. ಶತ್ರುವನ್ನು ಹುಡುಕುತ್ತ, ಅರಸುತ್ತ ಕೆರಳಿದ ಕಾಳಿಂಗನ ಹೆಡೆಯನ್ನು ಕೆಣಕಿ ಹಿಸುಕುವಂತೆ, ಗರ್ಜಿಸುವ ವ್ಯಾಘ್ರನ ಮುಖಕ್ಕೆ ಗುದ್ದುವಂತೆ ಶತ್ರುಗಳ ಮೇಲೆ ಸಾಗಿಹೋಗಿ ಧಾಳಿ ನಡೆಸಿದ.

ಇವನ ಚಪಲತೆಗೆ, ಇವನ ತೀವ್ರತೆಗೆ ತಾಳಲಾರದೆ ಅನೇಕ ಶತ್ರುಸ್ಥಾನಗಳು ನಾಶವಾದವು, ವಶವಾದವು. ಭೂತದ ಗಾಳಿ ಸೋಂಕಿದವನಂತೆ, ಬಿರುಗಾಳಿ ಎದ್ದ ಸಮುದ್ರದಲ್ಲಿ ತೂರಾಡುತ್ತ ಏಕಾಂಕಿಯಾಗಿ ಸಾಗುವ ನಾವೆಯಂತೆ ಮುನ್ನುಗ್ಗಿ ಹೋದ. ಕೂಗುತ್ತ ಇವನ ಪಡೆ, ಅದೂ ಹಿಂದೆ ಬಂದಿತು.

ಶತ್ರುಗಳು ಮರೆಬಿಟ್ಟು ಹೊರಕ್ಕೆ ಬಂದರು; ಬಂದೂಕು, ಮೆಷೀನ್

ಗನ್, ಟಾಮಿಗನ್‌ಗಳ ಉಪಯೋಗ ಮೀರಿತು. ಕೈಕೈ ಯುದ್ಧ, ಸನೀನು ಯುದ್ಧ, ರಿವಾಲ್ವರ್ ಯುದ್ಧ ಆರಂಭವಾಯಿತು. ಜೈ! ಶ್ರೀ ಗುರು ವಾಘ್! ಎಂಬ ರಣಕೇಳಿ ಮೆರೆಯಿತು........ಸಿಕ್ಕರು ಓಡಿಬಂದು ಮುತ್ತಿದರು. ಒಬ್ಬ ಜಪಾನಿಯನ್ನು ಹಿಡಿದು ತುಂಡರಿಸಿದರು ... ..ರಕ್ತದ ಮಡುವಿನಲ್ಲಿ ಆದಿ ನಾರಾಯಣ ಬಿದ್ದಿದ್ದ. ಇವನ ಜನ ಎತ್ತಿಕೊಂಡು ಹೋದರು. ಮೇಲು ಸಿರು ಆಡುತ್ತಿತ್ತು. ಪ್ರಜ್ಞೆ ಅಷ್ಟಾಗಿ ಇಲ್ಲ. ಆದರೂ ತುಟಿಯ ಬಿರುಕಿನಿಂದ ಮನಸ್ಸಿನ ಆಶೆಯೊಂದು 'ಅವಳನ್ನೊಂದು ಬಾರಿ ಕಂಡಿದ್ದರೆ!' ಎಂದು ನರಳಿತು.

"ಯಾರು? ಯಾರು ಕ್ಯಾಪ್ಟನ್?"

ಉಸಿರು ಕೇಳಿಸದಾಯಿತು.

ಶಿಬಿರಕ್ಕೆ ತಂದರು. ರಕ್ತವನ್ನು ಮೈಯೊಳಕ್ಕೆ ಬಿಟ್ಟರು. ಅಲ್ಲಿಂದ ಆಚೆಗಿದ್ದ ಯುದ್ಧರಂಗದ ಮೂಲ ನೆಲೆಗೆ ಸಾಗಿಸಿದರು. ಗಾಯಾಳುವಿಗೆ ಪ್ರಜ್ಞೆ ಬರಲಿಲ್ಲ.

ವಿಜ್ಞಾನ ಶಾಸ್ತ್ರವು ಕಂಡು ಹಿಡಿದಿರುವ ಎಲ್ಲ ನವೀನ ಸಾಧನಗಳೂ ಚಿಕಿತ್ಸೆಗೆ ಅನುವಾಗಿದ್ದವು ಚಿಕಿತ್ಸೆ ನಡೆಯಿತು.

ಸೈನ್ಯ ವಿಭಾಗದ ಸೂತ್ರಾಧಿಕಾರಿ ಬಂದು ನೋಡಿಕೊಂಡು ಹೋದ. ಹೋಗುವಾಗ ಇವನನ್ನು ಆರೈಕೆಮಾಡುತ್ತಿದ್ದ ಸಿಸ್ಟರನ್ನು ಕುರಿತು ಹೇಳಿದ: "ಈತನಿಗೆ ಎಚ್ಚರವಾದರೆ ತಿಳಿಸು–ಶಿಪಾಯಿಯಾದವನು ಇದಕ್ಕು ಹೆಚ್ಚಿನ ಕಲಿತನ ತೋರಿಸಲಾರ; ನಾನೀತನ ಬಗ್ಗೆ ಹೆಮ್ಮೆ ಪಡುತ್ತೇನೆ. ಯೋಧನ ಉಚ್ಚ ಗೌರವವೊಂದು ಇವನಿಗೆ ಪ್ರಾಪ್ತವಾಗುವುದು."

ಹಾಗೆಯೆ ಇತ್ತು.

ರೋಗಿ ಕೊಂಚಕಾಲ ಕಣ್ಣುಬಿಟ್ಟ; ಕಣ್ಣು ಏನನ್ನೊ ಅರಸಿತು.

ಸಿಸ್ಟರ್ ಇವನಿಗೊಂದು ಕಾಗದ ತಂದಳು. ಅದನ್ನು ಒಡೆದು ಇವನ

ಕೈಗಿತ್ತಳು. ಅದನ್ನು ತೆಗೆದುಕೊಳ್ಳುವ ಕೈ ತೆಗೆದುಕೊಳ್ಳಲಾರದೆ ಬಿತ್ತು; ಕಣ್ಣು ಎಲ್ಲಿಯೋ ತೇಲಿತು.

ಇವನು ಓದಲಾರನೆಂದು-ಇವಳು ಓದತೊಡಗಿದಳು.

ಅದು ಆರು ತಿಂಗಳ ಹಿಂದೆ ಬರೆದ ಕಾಗದ. ಹಿಂದೂಸ್ಥಾನವನ್ನೆಲ್ಲ ಸುತ್ತಿ ಸುತ್ತಿ ಕೊನೆಗೆ ಇಲ್ಲಿ ಬಂದು ಸೇರಿತು. ಅದು, ಲೂಸಿ ಮಧ್ಯ ಪ್ರಾಚ್ಯ ದಿಂದ ಬರೆದ ಕಾಗದ.

"ಪ್ರಿಯ ಸ್ನೇಹಿತ,"

"ನೀನು ಹೋದಮೇಲೆ ನನ್ನ ಜೀವಮಾನದಲ್ಲಿ ಏನೇನೊ ಘಟನೆಗಳಾಗಿ ಹೋದವು. ಈಗ, ನನಗೆ, ಅದನ್ನು ಕುರಿತು ಯೋಚಿಸುವಷ್ಟು, ಅದರ ವಿಚಾರ ಬರೆಯುವಷ್ಟು ಮನಸ್ಸಿನ ಸ್ತಿಮಿತ ಬಂದಿದೆ.

"ವಿಮಾನ ಧಾಳಿಯಲ್ಲಿ ನನ್ನ ತಂದೆ ಸತ್ತುಹೋದನು. ಅದು ಎಷ್ಟೊ ದಿನಗಳಾದ ಮೇಲೆ ಸಮಾಚಾರ ಬಂತು. ಅದು ಇನ್ನೂ ಆರುವುದಕ್ಕಿರಲಿಲ್ಲ. ಅಷ್ಟರಲ್ಲಿ ರಾಬರ್ಟ್ ವಿಮಾನ ಕದನದಲ್ಲಿ ವಿಮಾನ ಸಮೇತ ಸುಟ್ಟುಹೋದ ನೆಂದು, ಆತನ ತಾಯಿಯಿಂದ ಪತ್ರ ಬಂದಿತು. ಎರಡನೆಯ ಬಾರಿ ನಾನು ಅನಾಥೆಯಾದೆ. ನಾನಿದನ್ನು ಹೇಗೆ ತಡೆದುಕೊಂಡಿದ್ದೇನೆಯೊ ಹೇಳಲಾರೆ.

"ಸೈನಿಕರ ಸಾವಿನ ವಿಚಾರ ನೀನು ಹೇಳಿದುದು ನೆನಪಿಗೆ ಬರುತ್ತದೆ. ಆದರೆ, ಆಗ, ಅಂತಹ ಕಲ್ಪನೆಯನ್ನು ತಂದುಕೊಳ್ಳುವುದೂ ಕೂಡ ಮನಸ್ಸಿಗೆ ಮೀರಿದುದಾಗಿತ್ತು.

"ನನಗೆ ಈಗ ಜಗತ್ತಿನಲ್ಲಿ ಯಾರೂ ಇಲ್ಲ. ಆದರೆ ನಿನ್ನ ನೆನಪಾಗು ತ್ತದೆ. ನಿನ್ನ ವಿಚಾರ ತಿಳಿಯಲಿಲ್ಲ. ನೀನು ಸುಖವಾಗಿದ್ದರೆ ಅದು ನನಗೆ ಸಮಾಧಾನ. ನೀನು ನನ್ನನ್ನು ಮರೆತಿರಲಾರೆಯೆಂದೂ, ನನ್ನ ವಿಚಾರ ಬೇಸರ ಪಟ್ಟುಕೊಂಡಿಲ್ಲವೆಂದೂ ತಿಳಿದಿದ್ದೇನೆ. ನಿನಗೆ ಅವಕಾಶವಿದ್ದರೆ ಉತ್ತರ ಬರೆ. ದೈವ ನಿನ್ನ ಮೇಲೆ ಪ್ರಸನ್ನವಾಗಿರಲಿ!"

ಸಿಸ್ಟರ್ ಗಾಯಾಳುವನ್ನು ನೋಡಿದಳು. ನೋಡಿ ಕೂಗಿಕೊಂಡಳು. ವೈದ್ಯರ ಪರೀಕ್ಷೆಯಾಯಿತು. ದೇಹವನ್ನು ಮುಚ್ಚಿದರು.

ಬಹು ಸನ್ಮಾನ ಪುರಸ್ಸರವಾಗಿ ಆದಿನಾರಾಯಣನ ದೇಹಕ್ಕೆ ಅಂತ್ಯ ಕ್ರಿಯೆಯಾಯಿತು. ಸೇನಾಧಿಕಾರಿ ಲೂಸಿಗೆ ಜವಾಬು ಕಳಿಸಿ, ಯುದ್ಧದಲ್ಲಿ ಆದ ಘಾಯಗಳಿಂದ ಕ್ಯಾಪ್ಟನ್ ಆದಿನಾರಾಯಣ ಕಾಲವಾದನೆಂದೂ, ಸಾಯುವ ಮುನ್ನ ಪತ್ರ ಅವನಿಗೆ ಓದಿದ್ದರೂ, ಅವನಿಗೆ ತಿಳಿವು ಇರಲಿಲ್ಲ ವಾದ್ದರಿಂದ ಅದು ಅವನಿಗೆ ಗೊತ್ತಾಗಿರಲಾರದೆಂದೂ ಹೇಳಿ, ಅವನ ಶೂರತನ ವನ್ನು ಹೊಗಳಿ ಅವನ ಸಾವಿಗಾಗಿ ತನ್ನ ಶೋಕವನ್ನು ಅದರಲ್ಲಿ ತಿಳಿಸಿದ್ದನು.

ಲೂಸಿ ಮೂರನೆಯ ಬಾರಿ ಅನಾಥೆಯಾದಳು! ಎರಡನೆಯ ಬಾರಿ ವಿಧವೆಯಾದಳು!

ಹಾ! ವಿಧಿ!

29-11-44—12-12-44.

# ರಂಗಿ ರಂಬಿಯಾಗಿದ್ದಾಳೆ

---

ನಮ್ಮೂರು ಬಿಟ್ಟಾಗ ನಾನು ಹುಡುಗ. ಚೊಣ್ಣ ಅಥವ ಲುಂಗಿ ಹಾಕಿಕೊಳ್ಳಬೇಕಾದ ವಯಸ್ಸಿಗೆ ಕೊಂಚ ಹಿಂದು ಮುಂದು. ಅದೆಷ್ಟು ವಯಸ್ಸು, ಎಂದು ಕೇಳಬೇಡಿ. ಅವರವರ ಅನುಕೂಲ–ಸೌಲಭ್ಯ. ಅತ್ತ ಕಡೆ ಚೊಣ್ಣ ಹಾಕುವುದಿಲ್ಲ; ಲುಂಗಿ ಸುತ್ತುವುದಿಲ್ಲ. ಚಿಕ್ಕವರೂ ಪಂಚೆ ಉಡುತ್ತಾರೆ; ಹಾಗೆಂದರೆ ತಿಳಿಯುವುದಿಲ್ಲವೇನೊ? ಗೋಸಿ ಕಟ್ಟುತ್ತಾರೆ.

ರಂಗಿ–ನಿಮಗವಳನ್ನು ತೋರಿಸಬೇಕಾಗಿತ್ತು. ಆದರೆ ಆರು ಅರುವತ್ತು ಪಟ್ಟು ಹಾಕಿದರೆ ಎಷ್ಟು? ಅಷ್ಟು ಮೈಲಿ ದೂರ ಇದ್ದಾಳೆ.

ರಂಗಿ ಮೇಲು ಕುಲದವಳಲ್ಲ. ಈಗ ಹಾಗೆನ್ನಬಾರದು. ಆದರೆ ಆಗ ಹಾಗೆನ್ನುತ್ತಿದ್ದರು. ಅಂಥವರಿಗೆ ಕಾಟಕರು ಎಂದು ಕರೆಯುತ್ತಿದ್ದರು. ನಮ್ಮ ಕಡೆ ಗಾದೆಯಿದೆ–"ಕಾಟಕ ಜಾತಿ ಕೀಟಕ ಬುದ್ಧಿ". ಅದಲ್ಲ ಪ್ರಸಕ್ತ ವಿಷಯ.

ರಂಗಿ ನಮ್ಮ ಮನೆಯ ಹಿಂದಲ ಸಾಲಿನವಳು. ನಮ್ಮ ಮನೆ ಹಿತ್ತಲೂ ಅವಳ ಮನೆ ಹಿತ್ತಲೂ ಎದುರುಬದುರಾಗಿವೆ. ನಮ್ಮ ಕಡೆ ಹಿತ್ತಲಿರುವುದು ಮನೆ ಹಿಂದುಗಡೆ. ಇಲ್ಲಿನವರ ಹಾಗೆ ಮುಂದುಗಡೆ ಅಲ್ಲ. ಮಧ್ಯೆ ರಸ್ತೆ ಹರಿಯುತ್ತಿತ್ತು. ಅದಕ್ಕೆ ಓಣಿ, ಬಚ್ಚಲು ನೀರು ಹರಿಯುವ, ಎಮ್ಮೆ ಹೊರಳಾಡುವ, ನಾಯಿ ಮುಳುಗಿ ಬೀಳುವ ಓಣಿ ಎಂಬ ಹೆಸರು ಸರಿ.

ರಂಗಿ ನಮ್ಮ ಮನೆಗೆ ಸೆಗಣಿ ಎತ್ತಲು ಬರುತ್ತಿದ್ದಳು. ಹುಡುಗತನದಲ್ಲಿಯೂ ಕೆಟ್ಟಬುದ್ಧಿಯಿರುತ್ತದೆ! ಬಾಲ್ಯದ ಬುದ್ಧಿ ದೇವರ ಬುದ್ಧಿಯಂತೆ, ಎಂದು ಭಾವಿಸಲಿಕ್ಕಾಗುವುದಿಲ್ಲ. ಏನೊ ಒಂದು ದಿನ ನಾನವಳಿಗೆ "ಹೆಗ್ಗಣ–ಕರೀ ಹೆಗ್ಗಣ" ಎಂದು ಕರೆದೆ. ನನಗೀಗ ವಿಷಾದವೆನಿಸುತ್ತದೆ. ನಾನಾಗ

ಹೆಗ್ಗಣ ನೋಡಿರಲಿಲ್ಲ. ಬೆಂಗಳೂರಿನಲ್ಲಿಯೆ ಹೆಗ್ಗಣಗಳ ದರ್ಶನ, ಸ್ಪರ್ಶನ, ಸಂಭಾಷಣ ಮತ್ತು ಇತ್ಯಾದಿಗಳ ಪರಿಚಯ ಆದದ್ದು. ಬೆಂಗಳೂರಿನ ಹೆಗ್ಗಣಕ್ಕೆ ತಕ್ಕ ಲೋಕ ಪ್ರಶಸ್ತಿ ಅದೇಕೊ ಪ್ರಾಪ್ತವಾಗಿಲ್ಲ? ಆ, ಮೂಷಕ ಕುಲದ ರಾಜವರ್ಗಕ್ಕೆ-ಅದಲ್ಲ-ದೈತ್ಯವರ್ಗಕ್ಕೆ ಆದಾಗಬೇಕಾದದ್ದೆ!

ಇದೇಕೆ ಇವತ್ತು ಇಷ್ಟು ವಿಷಯಾಂತರ ಮಾಡುತ್ತಿದ್ದೇನೆ?

ಹೆಗ್ಗಣ ಆಗ ನೋಡದೆ 'ಹೆಗ್ಗಣ' ಎಂದು ಕರೆದೆ. ಅದು ಯಾರೊ ಹೇಳಿದ ಮಾತಿರಬೇಕು.

ನನ್ನ ಮಾತು ಕೇಳಿ ಕೆರಳಿದ ಆ ಕರಿಯ ಹೆಣ್ಣು ಸೆಗಣಿಬುಟ್ಟಿ, ಕುಕ್ಕಿ, ಸುತ್ತಲೂ ಸಿಡಿಸಿ, ಹಲ್ಲು ಕಡಿದು ಹೊರಟುಹೋಗಿದ್ದಳು. ಅದೀಗ ನನ್ನ ನೆನಪಿಗೆ ಬರತ್ತಿದೆ.

ರಂಗಿ ಪ್ರಾಯದವಳಾದಳು. ಒಂದು ದಿನ–ಅವಳ ಜೀವನದ ಮಹಾ ದಿನ-ವಧುವೂ ಆದಳು. ಅವಳು ಹೆಣ್ಣಾಗಿದ್ದಾಗಿನ ಸಡಗರವನ್ನು ಕಂಡಿದ್ದೇನೆ.

ಜೀವಮಾನದಲ್ಲಿ ದಿನಗಳು ಬಹಳ ಜಾಗ್ರತೆ, ಬಹಳ ಸುಲಭವಾಗಿ ಉರುಳಿ ಹೋಗುತ್ತವೆ. ಒಂದು ದಿನ ಗಂಡನನ್ನು ಬಿಟ್ಟುಬಂದಳು. ಯಾರೊ ಇಬ್ಬರು ಪುಸಲಾಯಿಸಿಕೊಂಡು ತಂದರು. ಪೇಟೆಯ ಬೀದಿಯಲ್ಲಿ ಯಾರದೊ ಜಗಲಿಯಮೇಲೆ ಈ ಇಬ್ಬರೊಂದಿಗೆ ರಾತ್ರಿ ಕಳೆದಳು. ಯಾರೋ ನೋಡಿದವರು, ರಂಗಿ ಮುಖ ಮುಚ್ಚಿಕೊಂಡು ಬಹಳ ಅಳುತ್ತಿದ್ದಳೆಂದು ಹೇಳಿದರು. ಹಾಗೆ ನೋಡಬಹುದೆ, ಎಂದು ನೀವು ನನ್ನನ್ನು ಕೇಳಬೇಡಿ. ನೋಡಿದ ಪಾಪಶೇಷವನ್ನು ಕಳೆದುಕೊಳ್ಳಲು ಅವರು ಹೇಳಿರಬೇಕು. ಕಥೆ ಮುಂದೆ ಬೆಳೆಯಲು ನಾನಿದನ್ನು ಬರೆಯಬೇಕು.

ನಾಲಗಾರ ಓಣಿ–ಅದು ನಮ್ಮೂರ ವೇಶ್ಯಾವೀಧಿ - ಅಲ್ಲಿ, ಮೂರನೆ ದಿನ ಇವಳ ಠಾಣೆಯಾಯಿತು. ಆ ದಿನವೂ ಇವಳ ಜೀವನದಲ್ಲಿ ಇನ್ನೊಂದು ಮಹಾದಿನ! ವೇಶ್ಯೆಯ ಪಟ್ಟ ಪ್ರಾಪ್ತವಾದ ದಿನ.

ನಮ್ಮೂರ ಲಿಗಾಡಿ ಫಕೀರಪ್ಪ ಹೇಳುತ್ತಾನೆ-"ಸೂಳೆ ಆಗೋದು ಇಷ್ಟ ರಲ್ಲೆ ಅದೆ. ಬಿಳಿ ಪತ್ತಲ ಉಡೋದು; ಕಾಣೋ ಹಾಂಗ ಸೊಂಟದಾಗ ಒಂದು ಕರವಸ್ತ್ರ ಸಿಕ್ಕಿಸೋದು; ತೆಲಿ-ಅವರು ಬಾಚತಾರಲ್ಲ ಅದ್ಹಾಂಗೂ, ಹಾಂಗ್ ಬಾಚೋದು; ಸೊಂಟದ ಮ್ಯಾಲೆ ಕೈ ಇಟುಕೊಂಡು ಬರೋರ್‍ನ ಹೋಗೋರನ್ನ ನೋಡೋದು; ಕಂಡೂ ಕಾಣದ ಹಾಂಗ ಕಣ್ಣು ಮಿಟಕಸೋದು; ತೆಲಿ ಹೀಂಗ ಹಾಕೋದು-"ಸೂಳೆಯ ಚಿತ್ರ-ಆ ಕಾಲದ್ದು ಅಭಿನಯ ಸಮೇತ ಸೃಷ್ಟಿಯಾಗಿ ಹೋಯಿತು. ರಂಗಿ ರಾಜಾರೋಷ್ ಅಂಗಡಿ ಇಟ್ಟಿದ್ದಾಳೆ; ವ್ಯಾಪಾರ ನಡೆಸುತ್ತಾಳೆ.

ಅಣ್ಣ ಅತ್ತಿಗೆ ಎಂದೊ ಮನೆಯಿಂದ ಹೊರಗೆ ಹಾಕಿದ್ದರು. ಈಗ ಜೀವನ ಅಬಾಧಿತವಾಗಿ, ನಿಶ್ಚಿಂತೆಯಿಂದ ಸಾಗುತ್ತಿದೆ ಎಂದು ಹೇಳಲು ಬರುವಂತಿಲ್ಲ. ಎಲ್ಲರ ಜೀವನೋದ್ಯೋಗದಲ್ಲೂ ಪೈಪೋಟಿ ಇದೆ.

ನನಗೊಬ್ಬರು ಒಂದು ಗಣ್ಯರ ಕೂಟದಲ್ಲಿ ಹೇಳಿದರು : ತಲೆತಲಾಂತರದಿಂದ (ಅದಕ್ಕೆ ಶಿಲೆಶಿಲೆಯಿಂದ ಎಂದು ಅವರು ಹೇಳಿದರು; ನಿಮಗೆ ತಿಳಿಯಲು ಸುಲಭ ಮಾಡಿದ್ದೇನೆ) ಬಂದ ವ್ಯಾಪಾರಸ್ತ, ತಲೆತಲಾಂತರದಿಂದ ಬಂದ ಪಂಡಿತ, ತಲೆತಲಾಂತರದಿಂದ ಬಂದ ನಾಯಕ ಸಾನಿ ಶ್ರೇಷ್ಠರಂತೆ. ಆದರೆ ನಾವಿದನ್ನು ಒಪ್ಪುವುದಿಲ್ಲ, ಅಲ್ಲವೆ? ಹಾಗಿದ್ದರೆ ರಂಗಿಗೆ ಜೀವನೋದ್ಯೋಗವೆ ಇಲ್ಲದಾಗುತ್ತಿತ್ತು !

ನಮ್ಮೂರಲ್ಲಿ ಹಾಗೆ ಪರಂಪರಾನುಗತವಾಗಿ ಬಂದ ನಾಯಕಸಾನಿಯರಿಲ್ಲ. ಇದ್ದ ವಂಶಗಳು ಕ್ಷೀಣವಾದವು. ಅವರೀಗ ಮದುವೆ, ವ್ಯಾಪಾರ ನಡೆಸಿಕೊಂಡು ಎಲ್ಲರಂತೆ ಇದ್ದಾರೆ.

ಮಧ್ಯೆ ಕಸುಬು ಕೈಗೊಂಡವ ನಾಲ್ಕಾರು ಇದ್ದವು. ಅವರಲ್ಲಿ, ನಾಗಿ-ಅವಳು ನಾಗರತ್ನ ಎಂದು ಕರೆಸಿಕೊಳ್ಳುತ್ತಿದ್ದಳು; ಕೃಷ್ಣಿ-ಅವಳು ಕೃಷ್ಣಾಸಾನಿ; ನಂಜಿ-ನಂಜಮ್ಮ ಇವರೆ ಮುಖ್ಯರು.

ಕೃಷ್ಣಿ ಹಳಬಳು, ಕಸುಬಿನಲ್ಲಿ ಪಳಗಿದವಳು. ಅವಳಿಗೂ ರಂಗಿಗೂ

ಛಲಬಿತ್ತು–ಯಾರು ಹೊಸದಾಗಿ ಕಾಲಿಗೆ ಚೈನು ಮಾಡಿಸಿಕೊಳ್ಳುತ್ತಾರೆ, ಎಂದು. ಆಗತಾನೆ ಕಾಲಿಗೆ ಚೈನು ಹಾಕಿಕೊಳ್ಳುವುದು ಹೊಸ ಫ್ಯಾಷನ್. ಢಿಯುಗಟ್ಟಲೆ ತೂಗುವ ಬೆಳ್ಳಿ ಕಾಲ್ಗಡಗಗಳು ಇನ್ನೂ ಮಾಯವಾಗಿರಲಿಲ್ಲ. ಅದರೊಂದಿಗೆ, ಈ ತೆಳ್ಳನೆಯ ಚೈನನ್ನು ಆನೆ ಮರಿಯೊಂದಿಗೆ ಆಡಿನ ಮರಿಯನ್ನು ಕಟ್ಟಿದಂತೆ ಹಾಕಿಕೊಳ್ಳುವುದು ಒಂದು ಲಕ್ಷಣ.

ಪಂದ್ಯ ಬಿತ್ತು. ನಮ್ಮೂರು ವ್ಯಾಪಾರ ಸ್ಥಳ; ನಾಲ್ಕಾರು ಕಡೆಯಿಂದ ರಸ್ತೆಗಳು ಸೇರುತ್ತವೆ. ದಿನಕ್ಕೆ ಇನ್ನೂರು-ಮುನ್ನೂರು ಜನವಾದರೂ ಹೊರಗಿನವರು ಇದ್ದೇ ಇರುತ್ತಿದ್ದರು ಆಗ. ಈಗ ಈ ಸಂಖ್ಯೆ ಹತ್ತರಷ್ಟು ಏರಿದೆ.

ಇಬ್ಬರೂ ಅಕ್ಕಸಾಲಿಗರಿಬ್ಬರನ್ನು ಗೊತ್ತುಮಾಡಿದರು. ಇಬ್ಬರೂ ಪೇಟೆ ಬೀದಿಯಲ್ಲಿ ಹಾದು ಅಕ್ಕಸಾಲಿಗರ ಮನೆಗೆ ಹೋಗುತ್ತಿದ್ದರು.

ತಮ್ಮಣ್ಣಯ್ಯನ ಅಂಗಡಿಯಲ್ಲಿ ಪರಊರಿನಲ್ಲಿ ಓದುತ್ತಿರುವ ತರುಣರು ಬಂದು ಕೂತು ಹರಟೆ ಹೊಡೆಯುವುದು ವಾಡಿಕೆ. ತಮ್ಮಣ್ಣಯ್ಯ ಒಳ್ಳೆ ಮಾತುಗಾರ. ಸದಾ ಅಂಗಡಿಯ ಮೇಲೆ ಕೂತಿರುತ್ತಿದ್ದುದರಿಂದ ಬೀದಿಯ ಪ್ರಪಂಚವನ್ನೂ ಆ ಬಗೆಯ ಜನರನ್ನೂ ನಿರೀಕ್ಷಿಸಿ ಅವರ ಮಾತನ್ನೂ ಆಲಿಸಿ ವಿಷಯ ಕೇಳಿಕೊಂಡಿರುತ್ತಿದ್ದ. ಅಂಥವನು ತನ್ನ ಲೋಕಾನುಭವವನ್ನು ಲೋಕಾಭಿರಾಮವಾಗಿ, ಲೋಕವನ್ನು ಇನ್ನೂ ಅರಿಯದ ತನಗಿಂತ ಚಿಕ್ಕ ವಯಸ್ಸಿನ ಅಲೌಕಿಕರಿಗೆ ತಿಳಿಸಿಕೊಡುತ್ತಿದ್ದ.

''ಅಕ್ಕೊ! ಬಂತು ನೋಡ್ರಿ!'' ಎಂದ.

''ಏನದು!'' ಎಂದು ಮುಖ ಮಾಡಿದರು ಬೀದಿ ಕಡೆ.

ಅಕ್ಕಸಾಲಿಗನ ಮನೆಯಿಂದ ರಂಗಿ, ಮುಸುರೆ ಕೂಡಿದ ಎಮ್ಮೆಯೋ ಪಾದಿ ನಡೆದು ಬರುತ್ತಿದ್ದಳು. ಮುಖದಲ್ಲಿ ನಗೆ. ಏಕೆ? ಪಂದ್ಯ ಗೆದ್ದಿದ್ದಾಳೆ. ಕಾಲಿಗೆ ಹೊಸ ಚೈನು; ಅದಕ್ಕೆ ಅಲ್ಲಲ್ಲಿ ನೇತು ಬಿದ್ದಿರುವ ಮರಿ ಚೈನುಗಳು. ಗೆದ್ದಳು ಪಂದ್ಯ ರಂಗಿ!

ಲಿಗಾಡಿ ಫಕೀರ, “ರಂಗಕ್ಕಾ! ಚೈನು ಚೊಲೊ ಐತೇಳು! ಯಾವಾಗ ಮಾಡಿಸಿದಿ?” ಎಂದು ಕೂಗಿ ಕೇಳಿದ ಒಂದೂ ಅರಿಯದವನಂತೆ. ಊರಿಗೇ ಗೊತ್ತಿತ್ತು ಇವರ ಪಂದ್ಯ.

“ಇದೇ ಈಗ!” ಎಂದಳು ರಂಗಿ.

“ಭೇಷ್ ಐತಿ! ಅಲ್ಲೇನ್ರಿ?” ಎಂದು ಪಕ್ಕದ ತಮ್ಮಣ್ಣಯ್ಯನವರನ್ನು ನೋಡಿದ. ತಮ್ಮಣ್ಣಯ್ಯ, “ಕರೀ ಕೊಳಗದಂತಾ ಕಾಲಿಗೆ ಬಿಳೀ ಬೆಳ್ಳಿ ಚೈನು ಅಗ್ದೀ ಮ್ಯಾಚ್ ಆಗ್ತದೆ” ಎಂದ. ಬೀದಿಯ ಹುಡುಗರು ಗೊಳ್ಳೆಂದರು. ಅಂಗಡಿಯಲ್ಲಿದ್ದ ಕಾಲೇಜು ಹುಡುಗರು ಈ ಅವಾಂತರ ನೋಡಿ ಬೆಪ್ಪಾಗಿದ್ದರು.

ಕೃಷ್ಣಿ ಉರಿಬಿಸಲಲ್ಲಿ ಅಕ್ಕಸಾಲಿಗನ ಅಂಗಡಿಗೆ ಹೋಗಿ, ಅದು ಸಿಕ್ಕದೆ ಸೋತು, ಸಿಡುಕು ಮುಖ ಹಾಕಿದ್ದವಳು ಬಿರಬಿರನೆ ನಡೆದು ಬರುತ್ತಿದ್ದಳು.

ಫಕೀರಪ್ಪ ಸುಮ್ಮನಿರಬೇಕಾಗಿತ್ತು. ಅದು ಬಿಟ್ಟು ‘ಅಲ್ಲಿ ನೋಡ್ರೀ!’ ಎಂದು ತೋರಿಸಿದ.

ಕೃಷ್ಣಿ ಇದನ್ನು ನೋಡಿದಳು. ಮುಂದೆ ರಂಗಿ ಹೋಗುತ್ತಿದ್ದಳು. ಅವಳ ಕಾಲಿನಲ್ಲಿ ಹೊಳೆಯುವ ಚೈನನ್ನು ನೋಡಿದಳು. ನೋಡಿ, ಅಂಗಡಿಗೆ ನೇರವಾಗಿ ನುಗ್ಗಿ, “ಬಾರೋ ಹೊರಕ್ಕೆ ಬಾ! ಕೊಡು ಬಾ, ನನ್ನ ಬಾಕಿ! ಅವತ್ತು ರಾತ್ರಿ ಮನೀಗ ಬಂದು ಕತ್ತಲಾಗ ಖೋಟಾ ರೂಪಾಯಿ ಕೊಟ್ಟು, ಮೂರು ದಿನ ಆದ್ರೂ ಆ ಬಾಕಿ ಕೂಡ ಬಾರ್ದ? ನನ್ಗ ರೂಪಾಯಿ ಕೊಟ್ಟು ವ್ಯಾಲೇಳು!” ಎಂದು ಅಬ್ಬರಿಸಿ ಒಳಕ್ಕೆ ನುಗ್ಗ ತೊಡಗಿದಳು.

ಹಾಯ್! ಹಾಯ್! ಏನೀ ವಿಪತ್ತು! ಏನೀ ಅಪಮಾನ!

ಡಬ್ಬಗಳ ಮಧ್ಯೆ, ಚಾಕಾಯಿ ಪೆಟ್ಟಿಗೆಗಳ ನಡುವೆ ತೂರಿ ಅಡಗಿ ಬಿಡುತ್ತಿದ್ದರು ಆ ಕಾಲೇಜು ಹುಡುಗರು. ಎಲ್ಲೆಲ್ಲೊ ಓಡತೊಡಗಿದರು ಹದ್ದು ಎರಗಿದ ಕೋಳಿ ಪಿಳ್ಳೆಗಳಂತೆ.

ಅವಳಿಗೆ ಖೋಟಿ ನಾಣ್ಯದ ಮೋಸಮಾಡಿ, ನಂತರ ಇಲ್ಲ ಎಂದು ಸಾಲ ಹೇಳಿ ಕೊಡದೆ ಇದ್ದ ಫಕೀರಪ್ಪನ ಸ್ಥಿತಿ, ಹಿಂದೆ ಅವರ ಕಸುಬನ್ನು ವ್ಯಾಖ್ಯಾನ ಮಾಡಿದ್ದ ರಸಿಕನ ಸ್ಥಿತಿ, ಹೇಗಿರಬಹುದು ?

ಬೀದಿ ಹುಡುಗರು ಆಕಾಶ ನಡುಗುವಂತೆ "ಹೋ !" ಎಂದು ನಕ್ಕವು.

ಆದರೆ ತಮ್ಮಣ್ಣಯ್ಯ-ಧೈರ್ಯಶಾಲಿ ನೋಡಿ ! ''ಏನೇ ಹುಷಾರ್ ! ಯಾರಂತ ತಿಳಿದೀ ? ಅಂಗ್ಡೀವಳಗ ನುಗ್ಗಿದರೆ ಚಮ್ಡ ಸುಲ್ಸೇನು. ಅವರ ಬಾಕಿ ಕೊಡೋದಿದ್ರೆ. ಹೊರಗ ಬಂದಾಗ ರಟ್ಟೀ ಹಿಡ್ದು ಕೇಳು. ಮೆಟ್ಟಗಲ್ಲು ಹತ್ತಿದ್ರೆ ನೋಡು !'' ಅಬ್ಬರಿಸಿದ. ವಿಧಿಯಿಲ್ಲ ನೋಡಿ ! ಏನಾದರೂ ಮಾಡಲೇ ಬೇಕು ಸಮಯಕ್ಕೆ !

ಕೆಟ್ಟ ದುರ್ಭಾಷೆಯ ಬೈಗಳ ಬೈದುಕೊಂಡು ಹೋದಳು ಕೃಷ್ಣಿ.

ಫಕ್ಕೀರ – ಫಕ್ಕೀರಪ್ಪ – ಲಿಗಾಡಿ ಫಕ್ಕೀರ ಶೆಟ್ಟಿ – ಅವನನ್ನು ನೆನೆಸಿಕೊಂಡರೆ ಮುಂದಕ್ಕೆ ಬರೆಯಲಾರದಷ್ಟು ವ್ಯಥೆಯಾಗುತ್ತದೆ. ದೀಪ ಹಚ್ಚಿದ ಮೇಲೆ ಶಾಲು ಮುಸುಗು ಹಾಕಿಕೊಂಡು ಹೋದ ಅಂಗಡಿ ಬಿಟ್ಟು. ಬಿಟ್ಟಾರೆ ಬೀದಿ ಹುಡುಗರು ? ಕಾದಿದ್ದವು. ಬೇಡ ಅವನ ಗೋಳು.

ಇದಾಗಿ ಎಷ್ಟೊ ವರ್ಷಗಳಾಯಿತು.

ಮೊನ್ನೆ, ಕೊಂಚ ದಿನದ ಹಿಂದೆ ನಾನು ನಮ್ಮೂರಿಗೆ ಹೋಗಿದ್ದೆ. ಅದೆಷ್ಟು ವರ್ಷಗಳೊ ಆಗಿತ್ತು. ಪಟ್ಟಣಗಳಲ್ಲಿರುವವರಿಗೆ ಕೆರೆ ಇದ್ದರೆ ಅದರ ಏರಿಯ ಮೇಲೆ ಓಡಾಡುವುದು ಹವ್ಯಾಸ. ನಮ್ಮೂರಿನಲ್ಲೂ ಅದಿದೆ. ನಮ್ಮೂರಿನವರೆ ಇವರಿಗೆ ಕಲಿಸಿದರೊ ? ಅಥವ ಇಲ್ಲಿಯವರನ್ನು ನೋಡಿ ನಮ್ಮವರು ಕಲಿತರೊ ? ನಮ್ಮೂರಿನವರನ್ನು ಕೇಳಿದರೆ, ಮೊದಲನೆಯದೆ ನಿಜ ಎನ್ನುತ್ತಾರೆ. ಇರಬೇಕು. ನಮ್ಮೂರಿನವರೂ ಆಗಾಗ್ಗೆ ಇಲ್ಲಿಗೆ ಬರುತ್ತಾರೆ. ಅವರಿಂದ ಇವರು ಕಲಿತಿರಬೇಕು.

ನಾನೂ ಹೋಗಿದ್ದೆ; ಕೃಷ್ಣಯ್ಯ ಜೊತೆಗೆ ಇದ್ದ.

ಬೇಸಗೆ ದಿನ. ಸಂಜೆ, ತೋಟದ ಹತ್ತಿರ ಕೆರೆಏರಿಯ ಮೇಲೆ ಬಹಳ ತಂಪು, ಪ್ರಶಸ್ತ ಅಡ್ಡಾಡಲಿಕ್ಕೆ. ಸೂರ್ಯ ಮುಳುಗಿರಲಿಲ್ಲ. ಅವನೇಕೆ ಮುಳುಗುತ್ತಾನೆ ಅಷ್ಟು ಜಾಗ್ರತೆ?

"ಆರಿವಳು............ಮಾಯರೂಪಿನ ಭೂರಿ ಭೂತವೊ? ತಿಳಿಯಲರಿದಿವಳಾರೆನುತ ಓಡಿದರಲ್ಲಿ ಬಣಜಿಗರು!" ಎಂದಿದೆ ನಳ ಚರಿತ್ರೆ ಪದ್ಯದಲ್ಲಿ. ದಮಯಂತಿಯನ್ನು ಕಂಡ ಶೂರ ವಣಿಕ್ ತಂಡ ಆ ರೀತಿ ಕಂಬಿಕಿತ್ತು ಓಡಿದರಂತೆ.

ನಾವು ಓಡಲಿಲ್ಲ. ನನಗೆ ಮಾತ್ರ ಕನಕದಾಸ ಹೇಳಿದಂತೆಯೆ ಆಯಿತು. ಅವಳು ಯಾರೂ ಅಲ್ಲ-ರಂಗಿ, ರಂಗಾಸಾನಿ. ಇದೀಗ ಸನ್ನಿವೇಶ! ಅವಳನ್ನು ನಿಮ್ಮ ಕಣ್ಣೆದುರಿನಲ್ಲಿ ತಂದು ನಿಲ್ಲಿಸುತ್ತೇನೆ.

ನಾನು ಸುಳ್ಳು ಹೇಳುವುದಿಲ್ಲ. ಸುಳ್ಳು ಬರೆಯುವುದಿಲ್ಲ. ರಂಗಿ! ನಾನೇನು ಹೇಳಲಿ? ಬೆನಾರಿಸ್ ಸೀರೆ-ಜರಿ ಟಿಶ್ಯುಸೀರೆ-ಅತಿನವುರು-ಇಪ್ಪತ್ತನೆ ಶತಮಾನದ ಮಸ್ಲಿನ್ ಸೀರೆ-ಕೆಂಪು ಬಣ್ಣದ್ದು-ಉಟ್ಟಿದ್ದಾಳೆ. ಆ ಕಳೆದ ಹಿಂದಿನ ಸುದಿನಗಳಲ್ಲಿ ಅದಕ್ಕೆ ನೂರಕ್ಕೆ ಕಡಮೆ ಇರಲಾರದು ಬೆಲೆ. ಅದರ ಒಳಗಡೆ ಹಾಕಿದ ಪೆಟಿಕೋಟ್-ಅರ್ಥಾತ್ ಲಂಗ-ಲೇಸ್ ಹಾಕಿದ ಲಂಗ-ಸೀರೆಯ ಸುಕ್ಕು ನಿರಿಗಳ ಆಚೆ ಕಾಣಿಸುತ್ತದೆ; ಎಂಥ ನವುರಾದ, ಎಂಥ ಅಪ್ ಟು ಡೇಟ್ ಫ್ಯಾಷನ್ನಿನ ಬ್ಲೌಸ್ ತೊಟ್ಟಿದ್ದಾಳೆ! ಅದರೊಳಗೂ ಹಾಕಿಕೊಂಡ ಒಳಕುಪ್ಪಸ ಕಾಣಿಸುತ್ತದೆ. ಕಿವಿಯ ಲೋಲಾಕು ಚಮಕಿಸುತ್ತದೆ. ಕೊರಳು-ತೆರೆದ ಕರೀ ಕೊರಳು, ಮುಂಗೈ, ಬೆರಳುಗಳಲ್ಲಿ ಚಿನ್ನವಿದೆ. ನನ್ನ ಮಾತನ್ನು ನಂಬದೆ ಹೋದರೆ ಆಣೆಯಿಡಬೇಕೆನ್ನಿಸುತ್ತದೆ-ಮುಖಕ್ಕೆ ಅತ್ಯಾಧುನಿಕ ಮೇಕ್ ಅಪ್, ಕರಿಯ ಮುಖಕ್ಕೂ ಹೊಂದಿದ ಮೇಕ್ ಅಪ್, ತುಟಿಗೆ ಕೆಂಪು ಬಣ್ಣ, ಕಣ್ಣ ಕೆಳಗಿನ ಕೆನ್ನೆಗೆ ಕೆಂಪು ರಂಗು (ರೂಸ್) ಮೈಗೆ ಬಳಿದ ಗಂ! ಎಂಬ ವಾಸನೆ, ಅಬಬ! ಇನ್ನೇನೊ! ಕಾಲಿಗೆ-ನೀವೆ ಊಹಿಸಿಕೊಳ್ಳಿ.

ಸೆಗಣಿ ಬಳಿಯುತ್ತ ಹೆಗ್ಗಣವೆನ್ನಿಸಿಕೊಂಡ ರಂಗಿಯಲ್ಲ ಈಗಿನ ರಂಗಮ್ಮನವರು!

"ಹೆಗ್ಗಣ ಎಂದು ಕರೆದಿದ್ದಿರಿ! ಈಗ ಹಾಗೆ ನೀವು ಕರೆದೀರ?" ಎಂದು ಎಲ್ಲಿ ಕೇಳಿಯೆ ಬಿಡುತ್ತಾಳೊ-ಎಂಬ ಭಯ ನನಗೆ. ಹೇಗಿದೆ ಮುಖ? ಪ್ರಸನ್ನೆಯಾದ ಗ್ರಾಮದೇವತೆಯಂತಿದೆ. ಜೊತೆಗೊಬ್ಬನಿದ್ದಾನೆ-ವಿಟ-ಬಿಳಿ ಉಡಿಗೆಯಲ್ಲಿ. ಹಿಂದೆ ಸ್ತ್ರೀ ಪುರುಷ ಪರಿವಾರವಿದೆ. ಕವಿ ಹೇಳಿದ ಮಾತು "ವಿಟ ವಿತಾನದ ಸೊಂಪು ನೆರೆಯೆ, ಕುಲಟಾಂಗನೆಯರ್ಗೆ ಜವ್ವನ ದೇಳ್ಗೆಮೆರೆಯೆ-" ನೆನಪಿಗೆ ಬಂದಿತು. ಗ್ರಾಮದೇವತೆ ಮುಂದುವರಿಯಿತು ಪರಿವಾರದೊಡನೆ.

"ಕೃಷ್ಣಯ್ಯ! ಏನಿದೀ ಆಶ್ಚರ್ಯ? ಒಡ್ಡರ ರಂಗಿ" ಎನ್ನುವುದರಲ್ಲೆ ಕೃಷ್ಣಯ್ಯ ಬಾಯಿಹಾಕಿ "ಅಲ್ಲ ಸ್ವಾಮಿ! ರಂಬಿ-ರಂಭೆ ಎನ್ನಬೇಕು ಅವಳನ್ನು. ಅವಳೊಬ್ಬ ಹೈ ಕ್ಲಾಸ್ ಡಿ. ಜಿ. ಅವಳ ಸ್ಟೇಟಸ್ ದೊಡ್ಡದು."

"ನಾಟ್ಯವಾಡುವುದನ್ನೂ ಕಲಿತಿದ್ದಾಳೊ-ಡಿ. ಜಿ. ಎನ್ನುತ್ತೀಯ?"

"ನೀವು ಇಂಗ್ಲಿಷ್ ಕಲಿತವರಿ ಹೀಗೆ! ಬಲು ತಕರಾರು ನಿಮ್ಮದು. ಸೂಳೆ ಅನ್ನೋದಕ್ಕೆ ಡಿ. ಜಿ. ಅನ್ನೋದು!"

"ಸರಿ."

"ಅವಳ ಮಾತು ಬೀದೀಲಿ ಬರುವಾಗ ಹೇಗೆ ಗೊತ್ತೆ?-'ಬೇಗ ಬಾರಪ್ಪ. ಏನು ಗಂಡಸರೊ ಇವರು! ಹೆಣ್ಣುಮಕ್ಕಳು ಎಂದ್ರೆ ಗೌರವವೇ ಬೇಡವೆ?' ಸಿನೀಮಾಕ್ಕೆ ಬರ್ತಾಳೆ-'ಗಂಡಸರ ಗಲಾಟೇಲಿ ಬರೋಕೆ ನನಗೆ ಬಹಳ ನಾಚಿಕೆ ಅಂದ್ರೆ!' ಎನ್ನುತ್ತಾಳೆ ಜನಕ್ಕೆ ಕೇಳೋಹಾಗೆ. ಸ್ಟೇಟಸ್ ದೊಡ್ಡದು ಸ್ವಾಮಿ ಈಗ. ಇವಳ ಗಿರಾಕಿ ಯಾರ್‍ಯಾರು ಅಂತೀರ? ನಮ್ಮ ತಾಲ್ಲೂಕು ಮೊದಲ ಅಧಿಕಾರಿ......."

"ಸಾಕು ಬಿಡಪ್ಪ ತಿಳೀತು."

"ಅಷ್ಟೇಕೆ ಸ್ವಾಮಿ? ಸಾವಕಾರ ರಾಮಪ್ಪನವರ ಮಗಾ,........ಮಿಲ್ ಶಾಪಣ್ಣ........ಎಷ್ಟು ಜನ?"

"ಸರಿಯಪ್ಪ!" ಎಂದೆ.

ಗಂಡನಿಗೆ ಹೆಂಡತಿಯಾಗಿ, ಸೆಗಣಿ ಬಳಿಯುತ್ತ, ತಲೆಯ ಹೇನು ಕುಕ್ಕಿಸಿಕೊಳ್ಳುತ್ತ, ರವಿಕೆ ಕೂರೆ ಒರಕೊಳ್ಳುತ್ತ ಇದ್ದಿದ್ದರೆ ಈ ವೈಭವ ಇರುತ್ತಿತ್ತೆ ? ಇದರ ಯೋಚನೆ ಅವಳಿಗೆ ಬರುತ್ತದೊ ?

ನಾನು ಇನ್ನೊಂದು ಬಾರಿ ಊರಿಗೆ ಹೋದಾಗ ಅವಳೊಬ್ಬಳು ನಿಜವಾಗಿಯೂ ಹೈಕ್ಲಾಸ್ ಡ್ಯಾನ್ಸಿಂಗ್ ಗರ್ಲ್ ಆಗಿ ಬಿಡುತ್ತಾಳೊ ?

ಆ ಮಹಿಷನ ವೈ, ಮಹಿಷನ ಗೆಳತಿಯ ಮೂತಿ ಇವು ಇರುವ ತನಕ ಅವಳಿಗೆ ಭರತ ಮಹರ್ಷಿಯ ನಾಟ್ಯಶಾಸ್ತ್ರ ಸಿದ್ಧಿಸಲಾರದು.

ಆದರೆ ಯಾರು ಬಲ್ಲರು ನಮ್ಮ ಕಣ್ಣೆದುರಿಗೇ ಅಘಟಿತಘಟನಾಕಾರ್ಯಗಳು ನಡೆಯುತ್ತಿರುವಾಗ ?

ಹಾಗೆ ನಡೆದಾಗ ಅವಶ್ಯ ಅದರ ವಿಚಾರ ತಿಳಿಸುತ್ತೇನೆ.

13-12-44.

# ಕನಸಿನ ಬದುಕು

ಅಂದಿನ ಸಂಜೆಯೂ ರಮ್ಯವಾಗಿತ್ತು. ಆ ಕೋಡುಗಲ್ಲಿನ ಮೇಲೆ ಹತ್ತಿ ಹೋಗಬೇಕೆಂದು ಮನಸ್ಸಾಯಿತು. ಅಲ್ಲಿಗೆ ಹೋದಾಗಲೆಲ್ಲ, ಸುತ್ತಲೂ ಪಸರಿಸಿರುವ ನಗರವನ್ನು ನೋಡುವ ಆಶೆ. ಹಾಗೆಯೇ ದೃಷ್ಟಿ ಭೂಮಿಯನ್ನು ಬಾನನ್ನು ಸೇರಿಸಿರುವ ಬಯಲು, ದೂರದಲ್ಲಿ ಗೆರೆಗಳಂತೆ ಬರೆದಿರುವ ಬೆಟ್ಟದ ಸಾಲು, ಅಲ್ಲಿಂದಾಚೆ ಆಕಾಶದ ಮುಸುಕು-ನೀಲಮುಸುಕು ಇವನ್ನೆಲ್ಲ ನಿರೀಕ್ಷಿಸುವುದು. ಆಗ ಮನಸ್ಸಿಗೇನೋ ತಣಿವು.

ಮನಸ್ಸಿಗೆ ಹಗುರವೆನಿಸಿದಾಗ ಅದು ಹಾಡಿಕೊಳ್ಳುತ್ತದೆ. ಸಂಜೆ ತಂಪಾಗಿದೆ; ಸಂಜೆ ಶಾಂತವಾಗಿದೆ; ಸಂಜೆ ಸೌಮ್ಯವಾದ ಸುಂದರ ಛಾಯೆಯಿಂದ ಕೂಡಿದೆ. ಹಾಡು ಹೇಗೊ ಆಗಿ ಶೃಂಗಾರ ಛಾಯೆಗೆ ತಿರುಗಿಕೊಂಚ ಸಣ್ಣದನಿಯಲ್ಲಿ ಹೊರಟಿತು. ಹಾಡಿನ ಭಾವವಿದು: ಆಗ ಮಧುಮಾಸ. ಮಧುರಾನಗರಿಯ ಜನರೆಲ್ಲ ಸುಖಿಸುತ್ತಿದ್ದರು. ಊರಾಚೆ ಉಪವನದಲ್ಲಿ ಉಪಗುಪ್ತನೆಂಬ ಬೌದ್ಧ ಭಿಕ್ಷು ಇದ್ದನು. ಅವನನ್ನು ಕಂಡವಳು ಪ್ರಸಿದ್ಧ ಗಣಿಕೆ ವಾಸವದತ್ತೆ..............ಅವನಲ್ಲಿ ಪ್ರಣಯಬೇಡಿದಳಂತೆ. ಕಥೆಯನ್ನು ಎಲ್ಲರೂ ಬಲ್ಲರು.

ಕೋಡುಗಲ್ಲಿನ ಪಾರ್ಶ್ವದಲ್ಲಿ ಒಬ್ಬ ಒಂಟಿಗನಾಗಿ ಕುಳಿತಿದ್ದ. ನನ್ನನ್ನು ನೋಡಿ, 'ಹಾಡು ಚೆನ್ನಾಗಿದೆ-ಈ ಸಂಜೆಗೆ ಆ ಶೃಂಗಾರಮಯ ಧಾಟಿ ಒಪ್ಪುತ್ತದೆ' ಎಂದ. ಅವನನ್ನು ಏತಕ್ಕೆ ಗಮನಿಸದೆ ಹೋದೆ, ಎಂದೂ ಅಂದುಕೊಂಡೆ.

"ನನಗೆ ಹಾಡಲು ಬಾರದು; ಏನೊ ಹೊಳೆಯಿತು-ಹೇಳಿಕೊಂಡೆ" ಎಂದೆ.

ಆತ ಅತಿ ಸ್ನೇಹದ ದೃಷ್ಟಿಯಿಂದಲೆ ಅಪರಿಚಿತನಾದ ನನ್ನನ್ನು ನೋಡಿದ. ಮಾತನಾಡಲು ಕುತೂಹಲ ತೋರಿಸಿದ. ಕುಳಿತೆ.

ಮೂರು ನಾಲ್ಕು ಚಿಕ್ಕಮಕ್ಕಳು-ಅವರಲ್ಲಿಬ್ಬರು ಹುಡುಗಿಯರು ಆ ಕಡಿದಾದ ಬಂಡೆ ಹತ್ತಿ, ಲಲ್ಲೆಯಿಂದ ಕುಣಿದು ನಲಿದು ಹೋದವು. ಈತ ಆ ಎಳೆಯರನ್ನು ಅತಿ ಮಮತೆಯಿಂದ ನೋಡತೊಡಗಿದ. ಚೆಲುವರಾದ ಮಕ್ಕಳು. ಆ ಇಬ್ಬರು ಹುಡುಗಿಯರಂತೂ ಚಿತ್ರ ಪತಂಗದಂತೆ ಸಿಂಗರಿಸಿಕೊಂಡಿದ್ದವು.

'ಈ ಮಕ್ಕಳ ಆಟ ನಿಮ್ಮ ಹಾಡಿನ ಹಿನ್ನೆಲೆಯಲ್ಲಿ ಪತಂಗ ನೃತ್ಯದಂತಿದೆ,' ಎಂದ ಆ ಅಪರಿಚಿತಸ್ಥ.

ಮಕ್ಕಳು ಲೀಲೆಯಾಡಿ ಇಳಿದು ಹೋದವು. ಅವನ್ನೇ ಆಶೆಯಿಂದ ಇವನು ನೋಡುತ್ತಿದ್ದ. ನಾವೆಲ್ಲರೂ ಮಕ್ಕಳನ್ನು ಪ್ರೀತಿಯಿಂದ ನೋಡುತ್ತೇವೆ. ಆದರೆ ನಮ್ಮ ಆಶೆ ಆ ಅಪರಿಚಿತ ಮಕ್ಕಳನ್ನೆ ಹಿಂಬಾಲಿಸುವುದಿಲ್ಲ. ಇವನ ಬುದ್ಧಿ ಜೋಡಣೆ ಸರಿಯಾಗಿದೆಯೊ? ಅಥವ ಎಲ್ಲಿಯಾದರೂ ಏನಾದರೂ ಸಡಿಲವಾಗಿದೆಯೊ? ಈ ಸಂದೇಹವು ಮನಸ್ಸಿನಲ್ಲಿ ಹೊಕ್ಕು ಹೊರಕ್ಕೆ ಹೋಯಿತು.

ಬಟ್ಟೆ, ಇರವು, ನಯ ಇದರಲ್ಲೆಲ್ಲ ಸುಶಿಕ್ಷಿತನಾಗಿದ್ದಾನೆ. ಬಾಹ್ಯ ಬಗೆಯಲ್ಲಿ ವೈಪರೀತ್ಯವೇನೂ ಇಲ್ಲ. ಆದರೂ ಅಷ್ಟು ಸಮ ಇರಲಾರದು ಎನ್ನಿಸಿತು ನನಗೆ.

ಆ ಮಾತು ಈ ಮಾತು ಪರಸ್ಪರ ಪರಿಚಯ ಇದೆಲ್ಲ ಆಯಿತು. ಅವನೊಬ್ಬ ಸಂಗೀತಗಾರನಂತೆ. ಹೆಸರೂ ಸ್ವಲ್ಪ ಬಳಕೆಯದಾಗಿತ್ತು. ಅವನ ಪಾಠಶಾಲೆಯ ಹೆಸರನ್ನು ಹೇಳಿದ. ತನ್ನ ಗುರು—ಬುವಾ ಇವರ ಹೆಸರನ್ನೂ ಹೇಳಿದ.

ಬಂಗಾಲಿಗಳು ಹಾಕಿಕೊಳ್ಳುವಂತಹ ಜುಬ್ಬ ಹಾಕಿ, ಅವರು ಉಡುವ ರೀತಿಯಲ್ಲಿ ನಿರಿಗೆ ಚಿಮ್ಮುವಂತೆ ಪಂಚೆ ಕಟ್ಟಿದ್ದ. ಉದ್ದ ಕೂದಲನ್ನು ನಯವಾಗಿ

ಮೇಲಕ್ಕೆ ಬಾಚಿದ್ದ. ತೆಳವು ಮುಖ, ಮೀಸೆಯಿಲ್ಲ. ಮೋರೆಯ ಮೇಲೆ ಮೈಲಿ ಕಲೆ, ಮಾತಿನಲ್ಲಿ ಕೊಂಚ ತೊದಲು.

ಹೊರಡುವಾಗ, ಅವಶ್ಯ ತನ್ನ ಗಾಯನ ಶಾಲೆಗೆ ಬರಬೇಕೆಂದೂ, ಅಗ್ರಹಪೂರ್ವವಾದ ಬೇಡಿಕೆಯೆಂದೂ ಹೇಳಿದ.

ಮಾರನೆ ದಿನ ನಾನಾಕೋಡುಗಲ್ಲಿಗೆ ಹೋಗಲಿಲ್ಲ. ಅವನು ಅಲ್ಲಿಗೆ ಬಂದಿರಬಹುದು ಎಂದುಕೊಂಡು ಅಲ್ಲಿಗೆ ಹೋಗುವುದು ಅಷ್ಟು ಹಿತವೆನಿಸ ಲಿಲ್ಲ. ಆದರೆ ಕೆಳಗಡೆ ಉದ್ಯಾನದ ಹೋಟೆಲಿನಲ್ಲಿ ಬೇಡವಾದ ಮನುಷ್ಯ– ಅವನೇ ಗಂಟುಬಿದ್ದ. ಸರಿ, ಆ ಸಂಜೆ ಇನ್ನಷ್ಟು ಮಾತು; ಮತ್ತೆ ಅವನಲ್ಲಿಗೆ ಬರಲು ಒತ್ತಾಯ.

ಒಂದು ಭಾನುವಾರ ಅಲ್ಲಿಗೆ ಹೋದದ್ದಾಯಿತು. ಉಪಚರಿಸಿದ. ಆದಾದ ಮೇಲೆ ತಂಬೂರಿ ತೆಗೆದುಕೊಂಡು ಶೃತಿಯಿಟ್ಟು ಹಾಡಿದ. ಗವಾಯಿಗಳ ಪದ್ಧತಿಯ ಮೇಲಿನ ಆ ಗಂಟಲ ಸಾಧನೆ ರಚಿಸದು. ಸಂಗೀತದ ವಾಸನೆ ಹಿಂದಿನಿಂದ ಬಂದದ್ದಾಗಿದ್ದರೂ ಆ ಬಗೆಯ ಪರಂಪರಾಗತ ಶಯ್ಯ ನನಗೆ ರುಚಿಸಲಿಲ್ಲ. ಬೇಸರ ಹೆಚ್ಚಾಯಿತು ; ತಪ್ಪಿಸಿಕೊಂಡು ಬಂದೆ.

ನಾನಾಗ ಒಬ್ಬನೆ. ಬಾಗಿಲು ಮುಚ್ಚಿಕೊಂಡು ನನ್ನ ಕೆಲಸದಲ್ಲಿರುತ್ತಿದ್ದೆ. ಒಂದು ದಿನ ಸಂಜೆ ಆತ ನಾನಿದ್ದಲ್ಲಿಗೇ ಬಂದ. ಓದುವುದನ್ನು ನಿಲ್ಲಿಸಿ ಕದ ತೆಗೆದೆ. ಬಂದ, ಮಾತನಾಡಿಸಿದುದಾಯಿತು. ಹೋದಾನು, ಎಂದೆ; ಹೋಗಲಿಲ್ಲ. ಮನಸ್ಸಿಗೆ ಕಿರುಕುಳವಾಯಿತು. ಏನಾದರೂ ಓದಿ, ಎಂದ.

ಧೂಳನ್ನು ಕೊಡವಿ ಪುಸ್ತಕಗಳನ್ನು ಈಚೆ ತೆಗೆದು ಅವನಿಗೆ ಎರಡು ಮೂರು ಕಥೆ ಓದಿದೆ. ಕೇಳಿ ಕಣ್ಣೀರು ಕರೆದ. ಹೋಗುವಾಗ ನನ್ನ ಕೈಯನ್ನು ತನ್ನ ಎರಡು ಕೈಗಳಲ್ಲೂ ಹಿಡಿದುಕೊಂಡು, "ನನ್ನದೂ ಒಂದು ಕಥೆಯಿದೆ. ನನ್ನ ಹೃದಯವನ್ನು ತಮ್ಮೆದುರಿನಲ್ಲಿ ಬಿಚ್ಚಬೇಕೆಂದು ಆಶೆ ಪಟ್ಟಿದ್ದೇನೆ. ವ್ಯಕ್ತಿಶಃ ಪರಿಚಯವಾಯಿತು ; ಈಗ ಅದಕ್ಕೆ ಅವಕಾಶ ಕೊಡಬೇಕು" ಎಂದ.

ನಾನೇನೂ ಹೇಳಲಿಲ್ಲ. ಮಹಡಿ ಮೆಟ್ಟಲಿಳಿದು ಹೊರಟುಹೋದ.

ಶಿಷ್ಟಾಚಾರದ ತೋರಿಕೆಗಾದರೂ ನಾನವನಲ್ಲಿಗೆ ಪುನಃ ಹೋಗಬೇಕಾಯಿತು. ಒಂದುದಿನ ಹೋದಾಗ ಆತ ಒಬ್ಬನೆ ತನ್ನ ಶಾಲೆಯಲ್ಲಿ ಹಾಡುತ್ತಿದ್ದ. ಕೊಂಚ ದೂರಕ್ಕೇ ಅದು ಕೇಳಿಸುತ್ತಿತ್ತು. ಇದು ಈಗ ಸಂಗೀತ! ಹೊರಗಡೆ ಯಿಂದಲೇ ಆಲಿಸಿದೆ. ಆ ಗಾನ ನನ್ನ ಎದೆಯಲ್ಲಿಯೂ ಹಾಡಿಕೊಂಡಂತಾ ಯಿತು. ಆ ಶೋಕಗೀತೆ ಅಲೆಯಲೆಯಾಗಿ ಮೆಲ್ಲಮೆಲ್ಲನೆ ಹರಿದುಹೋಗು ತ್ತಿತ್ತು. ಅವನ ಹೃದಯದ ಆಳು ಅವನ ಕೊರಳಿಂದ ಹೊರಕ್ಕೆ ಬಂದು ಕೇಳುವವರ ಎದೆಯನ್ನು ಹೊಗುತ್ತಿತ್ತು. ಅವನೀಗ ಸಂಗೀತಗಾರ! ಹಿಂದೆ ಹಾಡಿದಾಗ ಸಂಗೀತ ಶಾಸ್ತ್ರ.

ಹೊರಗೇ ನಿಂತಿದ್ದು, ಕೇಳಿದೆ. ಮುಗಿಸಿ ತನ್ನ ತಂಬೂರಿಯನ್ನು ಕೆಳ ಗಿಟ್ಟ ಮೇಲೆ ಒಳಕ್ಕೆ ಹೋದೆ. ಆಗ ಅವನ ಬಗ್ಗೆ ನನ್ನ ಗೌರವ ಹೆಚ್ಚಿತು.

ನಾನೇ ಹೇಳಿದೆ:

"ನೀವು ತನ್ಮಯರಾಗಿ ಹಾಡುತ್ತಿದ್ದಿರಿ. ನಾನು ಮಧ್ಯೆ ಬಂದು ಅದನ್ನು ಕೆಡಿಸಲು ಮನಸ್ಸಾಗದೆ ಹೊರಕ್ಕೆ ನಿಂತಿದ್ದು, ಕೇಳಿ, ಬಹಳ ಸಂತೋಷಪಟ್ಟೆ."

"ತಮ್ಮ ವಿಶ್ವಾಸ; ನೀವು ಒಳಕ್ಕೆ ಬರಬೇಕಾಗಿತ್ತು. ಎಷ್ಟು ಹೊತ್ತು ಕಾದಿದ್ದಿರೊ?" ಎಂದು ಸಂಕೋಚದಿಂದಲೆ ಹೇಳಿದ.

ನಾನು ಸ್ಪಷ್ಟವಾಗಿಯೆ ಹೇಳಿದೆ: 'ನೋಡಿ, ನೀವು ಆ ದಿನ ಹಾಡಿ ದಿರಿ. ಅದು ಮೆಚ್ಚಿಗೆಯಾಗಲಿಲ್ಲ. ಇಂದಿನದನ್ನು ಮೆಚ್ಚಿದೆ.'

ಅವನಿಗೆ ಆಶ್ಚರ್ಯ-ಅಂಥ ಪ್ರೌಢಶಯ್ಯೆಯಲ್ಲಿ ಹಾಡಿದೆ ಎಂದು!

"ಸಂಗೀತ ಕೇವಲ ಸುಖವುಂಟುಮಾಡುವುದಕ್ಕಾಗಿ. ಅದನ್ನು ಸಾಧಿಸು ವುದಕ್ಕಾಗಿಯೇ ಶಾಸ್ತ್ರ ನಿರ್ಮಾಣವಾಯಿತು. ಗವಾಯಿಗಳು-ವಿದ್ವಾಂಸರು ಶಾಸ್ತ್ರ ಹಿಡಿದರು; ಸುಖಬಿಟ್ಟರು. ಸಂಗೀತ ಗಂಟಲ ಸಾಧನೆಯಾಯಿತು."

ಅವನು ಈ ಮಾತನ್ನು ಒಪ್ಪಿಯಾನೆ? ಸಂದೇಹದಿಂದಲೆ ನೋಡಿದ. "ನೋಡಿ, ಈಗ ನೀವು ಹಾಡಿದಿರಿ. ತನ್ಮಯತೆಯಿಂದ, ತದಾತ್ಮ್ಯ ಭಾವ

ದಿಂದ. ಆದರೆ ಪಂಡಿತನೆನಿಸಿಕೊಳ್ಳುವಾಗ ಈ ಸುಖತಾನ ಇರುತ್ತದೆಯೆ ?" ಎಂದು ಮುಂದುವರಿಸಿದೆ.

" ಹಾಗೆ ಸುಖ, ಸುಖ ಎಂದರೆ? ಸೀನಿಮಾದವರೂ ಹಾಡುತ್ತಾರೆ. ಆಗ ಶಾಸ್ತ್ರ ಏನಾಗಬೇಕು ?"

" ಹಾಗೆ ಸುಖವಾಗಿ ಹಾಡುವುದಕ್ಕೆ ಜನ ಅಷ್ಟು ಕೇಳುತ್ತಾರೆ. ಆದರೆ ಶಾಸ್ತ್ರ ಹೋಗುವುದಿಲ್ಲ. ಸ್ಟೂಡಿಯೋಗಳವರು ಎಂತಹ ದೊಡ್ಡ ದೊಡ್ಡ ಸಂಗೀತ ವಿದ್ವಾಂಸರನ್ನಿಟ್ಟುಕೊಂಡು ರಾಗ-ಮೇಲಗಳನ್ನು ಕೂಡಿಸುವ ವಿಚಾರ ನಿಮಗೂ ತಿಳಿದಿದೆ." ಆಗ ಕಲಕತ್ತೆ, ಪೂನ, ಬೊಂಬಾಯಿಗಳಲ್ಲಿ ಪ್ರಸಿದ್ಧ ಸ್ಟೂಡಿಯೋಗಳು ಏರ್ಪಟ್ಟಿದ್ದವು. ಹೀಗೆ ಮಾತು ಬೆಳೆಯಿತು.

ಅವನ ಪಾಠಶಾಲೆಯ ಹಾಲಿನಲ್ಲಿ ದೊಡ್ಡದೊಂದು ಚಿತ್ರಹಾಕಿದ್ದ. " ಇದು ಯಾವುದು ? " ಎಂದೆ.

" ನಮ್ಮ ಗುರುಗಳು-ಹರಿನಾರಾಯಣ ಬುವರವರು "

" ಇವರೆಲ್ಲಿಯವರು ? "

" ಪುಣೆ. ನಾನವರಲ್ಲಿ ಎಂಟು ವರ್ಷ ಅಭ್ಯಾಸಮಾಡಿದೆ. "

"ಆದರೆ ಒಂದು ವಿಚಾರ.ಹಿಂದೂಸ್ಥಾನೀ ಸಂಗೀತದಲ್ಲಿ ಶೋಕ ಛಾಯೆ ಬಹಳವಾಗಿದೆ, ಎಂದು ಅನೇಕರು ಹೇಳುತ್ತಾರೆ. ಅದು ನಿಜ. ಅನೇಕ ರಾಗಗಳು ಅದೇ ಭಾವದಿಂದ ಭಾರವಾಗಿವೆ. ಅದು ನಮ್ಮ ಜನಾಂಗಕ್ಕೆ ಬಂದ ವೈಶಿಷ್ಟ್ಯವಿರಬೇಕು. ಕೇವಲ ಹರ್ಷ, ಕೇವಲ ಆಮೋದ-ಉತ್ಸಾಹಗಳನ್ನು ತರುವ ರಾಗಗಳು ಸೃಷ್ಟಿಯಾಗಲಿಲ್ಲ ಇಲ್ಲವೆ; ಪೋಷಣೆಯಾಗಲಿಲ್ಲ. "

" ಸುಖ ಅನುಭವಿಸಿದ್ದರಲ್ಲವೆ ಅದನ್ನು ಹಾಡುವುದು ? "

ನನಗೆ ವಿಷಾದವೆನಿಸಿತು. ನಾನು ಸುಮ್ಮನಾದೆ. ಅತ ಎದ್ದುಹೋಗಿ, ತಾನೊಂದು ಕಥೆ ಬರೆದಿದ್ದೇನೆ; ನಿಮಗೆ ಓದಿ ಹೇಳಬೇಕು ಎಂಬ ಆಶೆ

ಬಹಳವಿದೆ; ಇತ್ಯಾದಿ ಹೇಳಿ ಕಥೆ ಓದಿದ. "ಇದು ಸ್ವಲ್ಪ ಹೆಚ್ಚುಕಡಿಮೆ ನನ್ನ ಜೀವನವನ್ನೇ ಅವಲಂಬಿಸಿದೆ", ಎಂದು ಪರಿಚಯುವನ್ನು ಮಾಡಿಕೊಟ್ಟ.

ಅಕ್ಬರನ ಆಸ್ಥಾನದ ಕವಿ ಅಬ್ದುಲ್ ಫೈಜಿ ಒಬ್ಬ ಹಿಂದೂ ಗುರುವಿನ ಆಶ್ರಮದಲ್ಲಿ ಹಿಂದೂ ಧರ್ಮ ಶಾಸ್ತ್ರವನ್ನು ಅಭ್ಯಾಸ ಮಾಡುತ್ತಿದ್ದುದೂ, ಅಲ್ಲಿ ಆ ಗುರುವಿನ ಕನ್ಯೆ ಇವನನ್ನ ಮೋಹಿಸಿದುದೂ—ಮೊದಲಾದ ಹಸಿ—ಹಳೆ ಕಲ್ಪನೆಯ ಕಥೆ.

ಅಲ್ಲಲ್ಲಿ ಓದಿದ. "ಇದನ್ನು ನೋಡಿ, ತಿದ್ದಿ, ಅಚ್ಚು ಹಾಕಿಸುವ ಯತ್ನ ಮಾಡಿದರೆ ಬಹಳ ಕೃತಜ್ಞ" ಎಂದ

"ನಿಮ್ಮಲ್ಲೇ ಇರಲಿ; ನೋಡೋಣ" ಎಂದೆ.

ಹೊರಟು ಬರುವಾಗ ಆತನೆ ಹೇಳಿದ-ನಾವೂ ಬ್ರಾಹ್ಮಣರು; ನಾವು ಬ್ರಾಹ್ಮಣರೆಂದು ಬಂಗಾಳದಲ್ಲೆ ತೀರ್ಮಾನವಾಗಿದೆ. ನಾವು ಮತ್ಸ್ಯೇಂದ್ರ ಬ್ರಾಹ್ಮಣರು. ನಮ್ಮ ಪೂರ್ವಜ-ಮತ್ಸ್ಯೇಂದ್ರಎಂಬುವವನು ವೇದಕಾಲದಋಷಿ.

ವೇದದಲ್ಲಿ ಮಂತ್ರವೇ ಇದೆ........ಬಂಗಾಲದ ಪ್ರಸಿದ್ಧ ರಾಜ ಮನೆತನ-ಸೇನರು ನಮ್ಮವರು ...... ಪ್ರಸಿದ್ಧ ವಿದ್ವಾಂಸರಾದ ಡಾ|| ಬಸುದಾನಾಥ ಡೇ ಅವರು ನಮ್ಮವರು. ಇಲ್ಲಿಗೆ ಬಂದು ನಮ್ಮ ಮನೆಯಲ್ಲಿಯೇ ಇದ್ದರು.... ನನಗೊಂದು ವಿದ್ಯಾವಂತ ಬ್ರಾಹ್ಮಣ ಕನ್ಯೆ ಬೇಕಾಗಿದೆ... .. ....ತಮ್ಮ ಪ್ರೋತ್ಸಾಹದ ಮೂಲಕ ಶ್ರೀನಾಥರವರು ಏನಾದರೂ ಮನಸ್ಸು ಮಾಡಿದರೆ....

ಏನೇನೋ ಹೇಳಿದ. ಒಂದಕ್ಕೊಂದು ಅಸಮಂಜಸ.

ನಾನು ಮೊದಲು ಇವನ ತಲೆಯ ಬಗ್ಗೆ ಸಂದೇಹ ಪಟ್ಟುದು ನಿಜವಿರ ಬೇಕೆನಿಸಿತು.

ಮತ್ತೂ ಹೇಳಿದ–ಗೋಕರ್ಣದ ಮಹಾಬಲೇಶ್ವರನ ಪೂಜಕರು ಇವನ ಮುತ್ತಾತಂದಿರಂತೆ. ಬಿಟ್ಟರೆ ಸಾಕೆನಿಸಿತು.

ಕೊಡವಿಕೊಂಡು ಬಂದುಬಿಟ್ಟೆ.

ಮರೆತೆ. ಅವನ ಹೆಸರು ತಿಳಿಸಲಿಲ್ಲ. ದೇವನಾಥ–ಆದವನ ಹೆಸರು. ಈತನು ಆರ್ಯಸಮಾಜದಲ್ಲಿ ಕೊಂಚ ಓಡಾಡಿಕೊಂಡಿದ್ದ. ಇವನ ಬಗ್ಗೆ ವಿಷಯ ತಿಳಿದುಕೊಳ್ಳಬೇಕೆಂದು ನನ್ನ ಪರಿಚಯಸ್ಥ ನರಹರಿಶರ್ಮನನ್ನು ಕೇಳಿದೆ. ಆತ, ಆರ್ಯಸಮಾಜಿ ಉಪಜೀವನ ನಡೆಸಲು. ಆದರೆ ಉಳಿದೆಲ್ಲ ವಿಚಾರದಲ್ಲಿ ಕಟ್ಟಾ ಬ್ರಾಹ್ಮಣ. ಅವನು ಹೇಳಬಹುದಾದ ವಿಷಯಗಳನ್ನೆಲ್ಲ ತೂರಿ, ಕಸ ತೆಗೆದು ಜರಡಿ ಹಿಡಿದರೆ ಕೊಂಚಭಾಗ ಸತ್ಯಾಂಶ ಹೊರಬಿತ್ತು.

ಇವನು–ದೇವನಾಥ, ಈಚೆಗೆ ದೇವನಾಥನಾದ. ಹಿಂದಿನ ಹೆಸರು ದ್ಯಾವಪ್ಪ. ಇವರು ಬೆಸ್ತರ ಜನ. ಹರಿಹರ ಪ್ರಾಂತದವರು. ಉಳಿದ ವಿವರ ಅವನಿಗೆ ಗೊತ್ತಿಲ್ಲ. 'ಇವನ ಬ್ರಾಹ್ಮಣ್ಯದ ಚಾಪಲ್ಯಕ್ಕೇನು ಕಾರಣ?' 'ಅದೊಂದು ಮುಟ್ಠಾಳತನ!'

ತನ್ನ ಕುಲ, ಕೆಲವರ ದೃಷ್ಟಿಯಿಂದ ನಿನ್ನೆ ಕೀಳು. ಇಂದು ಅದು ತನ್ನ ಶೀಲ, ಸಂಸ್ಕಾರ, ತಪದಿಂದ ಉಚ್ಚವಾಗಬಾರದೇಕೆ? ಈ ಮಾತನ್ನು ಹೇಳಲು ಅವನಲ್ಲಿಗೆ ಹೋದೆ. ಅವನ ಬಗ್ಗೆ ಮನಸ್ಸು ಬಹಳ ಅಸಹ್ಯಗೊಂಡರೂ ಇವನ ಪ್ರಣಯದ ಕಥೆಯೇನು, ಎಂದು ತಿಳಿಯುವ ಆಶೆ.

ತನ್ನ ವಿಚಾರ ತಿಳಿಸಲು ಆತನಿಗೆ ಬಹಳ ಕುತೂಹಲ. 'ತಾವೇನು ಭಾವಿಸಿಕೊಳ್ಳುತ್ತೀರೊ?' ಸಂಕೋಚದಿಂದ ಆರಂಭಿಸಿದ.

'ಹೇಳಿ; ಪ್ರಣಯಕ್ಕೆ, ಪ್ರಣಯದ ಶೋಕಭಾರಕ್ಕೆ ಜನ ಹೊಸಬರಲ್ಲ'.

ಅವನು ಪೂನಾದಿಂದ ಬಂದಾಗ ತರುಣ; ಇಪ್ಪತ್ತು ಮೂರು ಇಪ್ಪತ್ತು ನಾಲ್ಕರವನು. ತಾರುಣ್ಯವು ಉಜ್ವಲವಾದ ಕಾಲ! ಕಲೆ ಮೈಗೂಡಿ, ಅದರ ಮೆರುಗಿನಿಂದ ತನ್ನ ವ್ಯಕ್ತಿತ್ವ ಬೆಳಗಿದಾಗ, ತರುಣನು ಜಗತ್ತು ತನ್ನ ಅಧೀನ, ಎಂದು ಬಗೆದನು. ಉತ್ತರಾದಿ ಸಂಗೀತಕ್ಕೆ ಮೋಹಿಸಿದವರೂ ಇದ್ದರು. ಬಂದು ಬೆಂಗಳೂರಿನಲ್ಲಿ ಗಾಯನ ಶಾಲೆಯನ್ನು ಆರಂಭಿಸಿದ. ಉತ್ತರಾದಿ ಸಂಗೀತದ ಲಾಲಿತ್ಯಕ್ಕೆ ಮನಸೋತ ಜನರು ತಮ್ಮ ಮಕ್ಕಳನ್ನು, ಹುಡುಗ ಹುಡುಗಿಯರನ್ನು ಇವನ ಶಾಲೆಗೆ ಕಳುಹಿಸುತ್ತಿದ್ದರು. ಸಂಗೀತಗಾರರಿಗೆ

ಶೀಲಸ್ಥೈರ್ಯ ಕಡಮೆ, ಎಂಬ ಅಪವಾದಕ್ಕೆ ಪಕ್ಕಾಗದಂತೆ ಬಹಳ ಎಚ್ಚರದಿಂದ ಇದ್ದ.

ಇವನ ಶಾಲೆ ಬಹಳ ಅಭಿವೃದ್ಧಿ ಹೊಂದಿತು. ನಾಲ್ಕಾರು ವರ್ಷಗಳಲ್ಲಿ ಇವನೂ ಹತ್ತಿಪ್ಪತ್ತು ಸಹಸ್ರ ದುಡಿದು ಮನೆ ಅಂಗಡಿಗಳನ್ನು ಕಟ್ಟಿಸಿ ಹಣದ ವಿಷಯಕವಾದ ಚಿಂತೆಯಿಂದ ಮುಕ್ತನಾಗಿದ್ದ.

ಕೆಲವರು ಹೆಣ್ಣುಮಕ್ಕಳ ಮನೆಗೂ ಹೋಗಿ ಪಾಠ ಹೇಳಿ ಬರುತ್ತಿದ್ದುದುಂಟು. ಆಗ ಈ ಬಗೆಯ ಸುಧಾರಿಸಿದ ಜೀವನವನ್ನು ನಡೆಸುತ್ತಿದ್ದವರಲ್ಲಿ ಅಧಿಕಾರದಲ್ಲಿದ್ದ ಬ್ರಾಹ್ಮಣರೇ ವಿಶೇಷ. ಅವರ ಮನೆಗಳಿಗೆ ಹೋಗಿ ಬರುತ್ತಿದ್ದ ಈತ, ಅವರ ನಯ ನಾಜೂಕಿಗೆ ಮನಸೋತು, ತಾನು ಮೀನು ಹಿಡಿಯುವ ಕುಲದವನೆಂದರೆ ಅದೆಂತಹ ಹೀನಾಯ, ಎಂದು ಬಗೆದ.

ಬ್ರಾಹ್ಮಣನ ಶಿಷ್ಯ; ಇತ್ತ ಕಡೆಯವನಲ್ಲ; ಏನಾದರೊಂದು ಸುಳ್ಳು ಹೇಳಿ ತನ್ನ ಕುಲ ಮರೆಸಿ ತನ್ನ ವೃತ್ತಿ ಹೆಚ್ಚಿಸಿಕೊಳ್ಳಬಹುದು.

ಅದನ್ನು ಹೊರಗೆಡಹುವ ಗೋಜಿಗೇ ಹೋಗದೆ, ಏನೋ ಹೇಳಿ, ಎಲ್ಲಿಯದೊ ಅಂಟಿಸಿ, ಹೊಸದೊಂದ ಹೆಸರನ್ನು ಹುಡುಕಿಕೊಂಡು, ಇವನಂತಹ ಕೆಲವರನ್ನು ಕಲೆಹಾಕಿ ' ಮತ್ಸ್ಯೇಂದ್ರ 'ನ ಅನುಯಾಯಿಯಾದ ' ಬ್ರಾಹ್ಮಣ ' ನಾದ.

ಇವನ ಸೌಮ್ಯ ಭಾವ, ಸೌಜನ್ಯ, ಸ್ನೇಹ ಗುಣಗಳನ್ನೂ, ಆಶ್ರಯ ಮನೋಭಾವವನ್ನೂ ಜನ ಮೆಚ್ಚಿ, ಇವನ ಹಿಂದಿನದನ್ನು ಕೆಣಕುವ ಗೋಜಿಗೆ ಯಾರೂ ಹೋಗದಿದ್ದರು.

ಈತನು ಪಾಠ ಹೇಳುವ ಒಂದು ಮನೆ, ವಿಟ್ಠಲ ರಾವ್ ಮುಕ್ತಾಂಕರ್ ಎಂಬ ಮಹಾರಾಷ್ಟ್ರ ಬ್ರಾಹ್ಮಣನದು. ಆತನ ವಂಶಜರು ಮೈಸೂರು ಹಿಂದಿನ ಇತಿಹಾಸ ಕಾಲದಲ್ಲಿ ಇಲ್ಲಿ ಬಂದು ನೆಲಸಿದವರು. ಇವನು ಎಂಜಿನೀಯರ್ ಆಗಿದ್ದ. ಹಣ ವಿಶೇಷಗಳಿಸಿ, ಇಟ್ಟು, ಕಾಲವಾಗಿದ್ದ. ಭವ್ಯ

ವಾದ ಮನೆಗೆ ಒಡೆಯರು ಮೂವರು–ಶಾಂತಾಬಾಯಿ ಹೆಂಡತಿ, ಬಾಲವಿತಂತು ಮಗಳು ವೇಣು, ಮುಟ್ಠಾಳ ಮಗ ಗೋಪಾಳ–ಚಿಕ್ಕವನು.

ವಿತಂತುವಿಗೇಕೆ ಸಂಗೀತ ಪಾಠ? ಅವನ ಜನ ಅವನಿದ್ದಾಗ ಆಕ್ಷೇಪಿಸಿದ್ದರು. ಆದರೆ ಬಾಲ್ಯದಲ್ಲಿ ಮದುವೆ ಮಾಡಿದ ಅವಿವೇಕವನ್ನು ಕಂಡ ತಂದೆ, ತನ್ನ ಮಗಳು ಅಪ್ರಬುದ್ಧಮತಿ ಯಾಗಬಾರದು, ತನ್ನ ಒಂಟಿ ಬಾಳನ್ನು ಆದಷ್ಟು ಮರೆಯಬೇಕು ಎಂದು ಬಯಸಿ ಅವಳಿಗೆ ಓದಿಗೆ ಹಾಕಿದ; ಮರಾಠಿ ಸಂಗೀತ ಕಲಿಸಲು ಇವನನ್ನು-ದೇವನಾಥನನ್ನು ಗೊತ್ತುಮಾಡಿದ.

ಮಹಾರಾಷ್ಟ್ರದ ಕೇಂದ್ರ ಸ್ಥಾನದಲ್ಲೇ ಇದ್ದು ವಿದ್ಯೆಗಳಿಸಿದ ಸಂಗೀತಗಾರ, ಅವರ ಮನೆಯಲ್ಲಿ ತನ್ನ ವಿದ್ಯೆಯಿಂದ, ಅವರ ಮನೆ ಮಾತಿನ ಪರಿಚಯದಿಂದ ವಿಶೇಷ ಬಳಕೆಯವನಾಗಿದ್ದ. ಅಲ್ಲದೆ ಗಂಡಸರಿಲ್ಲದ ಮನೆ- ಯಾರಾದರೊಬ್ಬರು ಆಪ್ತರಾದರೆ ಅವರ ಅವಲಂಬನ ಹೆಂಗಸರಿಗೆ ಬೇಕಾಗುತ್ತದೆ.

ಕಾನನದ ಬೆಳದಿಂಗಳಂತೆ–ಎಂಬುದೊಂದು ಸಾಧಾರಣ ರೂಢಿಯಲ್ಲಿರುವ ಉಪಮಾನ. ಕಾನನದ ಬೆಳದಿಂಗಳೊಂದೇ ವ್ಯರ್ಥವಲ್ಲ. ಕಾನನದ ಹೂವು, ಕಾನನದ ಹಣ್ಣು, ಕಾನನದ ಶಾಂತಿ–ಚೆಲುವು ಇವೆಲ್ಲ ವ್ಯರ್ಥ ಅನುಭವಿಸುವವರಿಲ್ಲದೆ. ಹಾಗೆಯೆ ಮೂರ್ಖ ಪರಂಪರೆಗಳ ಕಾನನದಲ್ಲಿ ವೇಣು ಬಾಯಿಯ ಸೌಂದರ್ಯ-ಯೌವನ ಎರಡೂ ವ್ಯರ್ಥವಾಗುತ್ತಿದ್ದವು. ಆದರೆ ಏರು ಜವ್ವನದ ಕಾವು, ರತಿಯ ಆಶೆ, ಪುರುಷನ ಸಾಮೀಪ್ಯ, ಏಕಾಂತವಾಗಿ ಆತನೊಂದಿಗೆ ಗಂಟೆಗಟ್ಟಲೆ ಕಳೆಯಬೇಕಾದ ಅವಕಾಶ, ಅವಕಾಶ ಕಲ್ಪನೆ ಇದ್ದಾಗ, ಕಾಮದ ಬಿಸಿ ಮೈಗೇರದೆ ಇರುವುದು ವೇಣು ಬಾಯಿಗೆ ಆಗಲಿಲ್ಲ.

ಒಂದು ದಿನ ಮಂಕ ಗೋಪಾಳನ ಕೂಡ ದೇವನಾಥ್ ಮತ್ತು ವೇಣು, ಈ ಮೂವರು ವಿಕ್ಟೋರಿಯದಲ್ಲಿ (ಆಗ ಆ ಬಗೆಯ ವಾಹನಗಳೆ ಅನುಕೂಲಸ್ಥರ ಮನೆಯಲ್ಲಿ ಬಳಕೆಯಲ್ಲಿದ್ದವು) ಸೌತ್ ಪೆರೇಡಿನಲ್ಲಿ ನಡೆಯುವ ವರ್ಷಾರಂಭದ ಸೈನಿಕ ಕವಾತನ್ನು ನೋಡಲು ಹೋಗಿದ್ದರು.

ಆ ಮಂಕ ದಾರಿಯಲ್ಲಿ ಇಳಿದು ಒಂದು ಮಿಲಿಟರಿ ಹೋಟೆಲಿಗೆ ಹೋದ.

'ನೀವು ಹೋಗಿ; ನಾನು ಬರ್ತೀನೆ' ಎಂದು ಹೇಳಿ ಹೋದ. ಹದಿನೇಳು ಹದಿನೆಂಟು ವರ್ಷಕ್ಕೆ ಇದನ್ನೆಲ್ಲ ಕಲಿತಿದ್ದ. ವಿಧವೆಯ ಮಕ್ಕಳು ಅಂಕೆ ತಪ್ಪುವುದು ಹೊಸತೇನೂ ಅಲ್ಲ.

ಅವನು ಬಾರದೆ, ಅವನಿಗಾಗಿ ಗಾಡಿ ನಿಲ್ಲಿಸದೆ-'ಗಾಡಿ ಹೋಗಲಿ' ಎಂದಳು ಹುಡುಗಿ; ಗಾಡಿ ಹೊರಟಿತು. ಎದುರಿಗೆ ಕೂತಿದ್ದ ದೇವನಾಥನನ್ನು ಹತ್ತಿರ ಪಕ್ಕಕ್ಕೆ ಕರೆದು ಕೂರಿಸಿಕೊಂಡಳು. ಇವನು ಬಲು ಸಂಕೋಚ ಪಟ್ಟ. ಆವಳು ಬಿಡಲಿಲ್ಲ. ಗಾಡಿಯವನ ಕಿವಿಗೆ ಬಿದ್ದು ಆಭಾಸವಾಗಬಾರದೆಂದು ಒಂದು ಪಕ್ಕಕ್ಕೆ ಕೂತ. ಗಾಡಿ ಹೋಗುತ್ತಿತ್ತು. ರಸ್ತೆಯಲ್ಲಿ ಕುಲುಕಿದಾಗ ಇಬ್ಬರ ಮೈ ತಗುಲುವುದು-ಅಥವ ಆಕೆಯೆ ಬೇಕೆಂದು ತಗುಲಿಸುತ್ತಿದ್ದ ಳೇನೋ! ಆಗ ಇದ್ದ ಸೈಲೆಂಟ್ ಸಿನಿಮಾ ಚಿತ್ರಗಳಲ್ಲಿ ಕಾಮೋತ್ತೇಜಕ ವಿಲಾಸಗಳು ಹೆಚ್ಚು. ಅವನ್ನೆಲ್ಲ ಅವಳು ನೋಡಿದ್ದಳು. ಮೇಜಿನ ಕೆಳಗೆ ಗಂಡಸು ಹೆಂಗಸರು ಪರಸ್ಪರ ಕಾಲನ್ನು ಮೆಲ್ಲನೆ ತುಳಿಯುವುದು, ಅರ್ಥಪೂರ್ಣ ವಾಗಿ ನೋಡುವುದು, ಕೈ ಹೊಂದಿದರೆ ಮರೆಯಲ್ಲಿ ಹಿಸುಕುವುದು ಮೈಯ ಸೆರಗು ಮುಚ್ಚದೆ ಇರುವುದು ಇದನ್ನೆಲ್ಲ ನೋಡಿದ್ದ ಆಕೆಗೆ-ಇಪ್ಪತ್ತು ವರ್ಷ ಯೌವ್ವನದ, ಪುರುಷ ಸ್ಪರ್ಶದ ದಿವ್ಯಾನುಭವದಿಂದ ವಂಚಿತಳಾದ ಬಾಲವಿ ತಂತುವಿಗೆ-ಈ ಏಕಾಂತ ಸಹಚರಿ, ಕುದುರೆ ಗಾಡಿಯಲ್ಲಿನ ಸಂಚಾರ ನಿರ್ಬಾಧಿ ತವಾಗಿ ಅವಕಾಶವನ್ನು ಕಲ್ಪಿಸಿತು. ಅವನ ಎದೆ ಹೊಡೆದುಕೊಳ್ಳುತ್ತಿತ್ತು. ಬಹಳ ಭಯದಿಂದ ಅವಳನ್ನೆ ನೋಡಿದನು. ಏನೋ ಯೋಚಿಸಿ ಸೀಟಿನ ಆಚೆ ಮೂಲೆ ಹಿಡಿದು ಕುಳಿತನು. ಹುಡುಗಿ ಸ್ವಲ್ಪ ಹೊತ್ತು ಸುಮ್ಮನಾದಳು. ಮತ್ತೆ ಇವನ ಕಡೆ ನೋಡಿ ಮುಖ ಮೈಯನ್ನು ಸೊಟ್ಟಮಾಡಿ ತನ್ನ ಅಸಮ್ಮತಿ ಯನ್ನು ಸೂಚಿಸಿದವಳಂತೆ ಅವಳೂ ಮೂಲೆ ಹಿಡಿದು ಕೂತಳು. ಆ ಹುಡು ಗತನದ ಚೆಲ್ಲಾಟ ಇವನಿಗೆ ಮುದ್ದಾಗಿ ಕಂಡಿತು. ಕಂಡಾಕ್ಷಣ ?

ಒಂದು ಹಳ್ಳಿಗರ ಗಾದೆಯಿದೆ-ಹೆಂಗಸು ಮಾಯಿ (ಮಾಯೆ) ಗಂಡಸ ನಾಯಿ. ಇದರಲ್ಲಿ ನಿಜವಿರಬೇಕು. ಸಂಗೀತದ ಮೇಷ್ಟರಿಗೆ ತಳಮಳ ಹೆಚ್ಚಾಯಿತು. ಎದೆಯಲ್ಲಿ ಸರಳಿ, ಜಂಟಿ ವರಸೆಗಳೆಲ್ಲ ತಾಳ ಹಾಕಿ ಕುಟ್ಟ ತೊಡಗಿದವು.

ಜನಸಂದಣಿ ಬಹಳ. ಗಾಡಿಯನ್ನು ರಸ್ತೆಯ ಪಕ್ಕದಲ್ಲಿ ನಿಲ್ಲಿಸುವು ದಕ್ಕೆ ದಂಡಿನ ಪೋಲೀಸರು ಅವಕಾಶಕೊಡರು. ಹುಡುಗಿ ಗುಂಪಿನ ಮಧ್ಯೆ ಬರಲಾರೆನೆನ್ನುತ್ತಾಳೆ. ಗಾಡಿಯೊಳಕ್ಕೆ ಹತ್ತಲು ಇರುವ ಕಾಲಿಂಬಿನ ಮೇಲೆ ನಿಂತಿದ್ದಾಳೆ. 'ಗುರುಗಳೇ ಕಾಣಿಸುವುದಿಲ್ಲ.' 'ಹತ್ತಿರ ಬನ್ನಿ, ಭುಜ ಹಿಡಿದು ನಿಲ್ಲುತ್ತೇನೆ' ಎನ್ನುತ್ತಾಳೆ. 'ಗಾಡಿಯವನಿದ್ದಾನೆ', ಎಂದರೆ 'ಮುದುಕ; ನಮ್ಮಲ್ಲಿ ಬಹಳ ಸಲಿಗೆ; ಪರವಾ ಇಲ್ಲ' ಎನ್ನುತ್ತಾಳೆ.

ಇವನು ನೋಡುವುದಕ್ಕೆ ಬಿಡಳು. ಇವನು ದೂರ ಸರಿದರೆ ಕೂಗಿ ಕೊಳ್ಳುತ್ತಾಳೆ. 'ಒಂದೇ ಒಂದು ಸಲ ತೋರಿಸಿ ಬಿಡಿ' ಎಂದು ಅಂಗ ಲಾಚುವಳು.

"ಹೇಗೆ ತೋರಿಸುವುದು ?–ನೀನು ಬಹಳ ಮೋಟ. ನಿನ್ನನ್ನು ಯಾರಾ ದರೂ ಎತ್ತಿ ತೋರಿಸಬೇಕು." ಅದೇ ಅವಳಿಗೆ ಬೇಕಾದದ್ದು. ಹಠಕ್ಕೆ ಕೂತಳು; ಮಕ್ಕಳಾಡುವಂತೆ ರಂಪ ಮಾಡಿದಳು. "ಇಲ್ಲೆ ಕೂತುಬಿಡ್ತೇನೆ." "ನೆಲದ ಮೇಲೆ ಬಿದ್ದು ಬಿಡ್ತೇನೆ." ಅಚ್ಚೆಯಿಂದ ಲಲ್ಲೆ ಮಾಡಿ ಬೆಳಸಿದ ಹೆಣ್ಣು, ದೈವಮೋಸ ಮಾಡಿತೆಂದು ಸಹಾನುಭೂತಿಯ ಮುದ್ದಿನಲ್ಲಿ ಬೆಳೆಸಿದ ಹೆಣ್ಣು, ತಂದೆಯ ಅಂಕೆಯಿಲ್ಲದೆ, ತಾಯಿಯ ಭಯ ಮೀರಿ, ಏಕಾಂತವಾಗಿ ಈತನೊಂದಿಗೆ ವ್ಯವಹರಿಸುವ ಹೆಣ್ಣು!

ಇವನ ಮನಸ್ಸಿಗೂ ಏನನ್ನಿಸಿತೊ...." ಒಂದೇ ಒಂದು ಬಾರಿ; ಜನ ನೋಡಿದರೆ ಏನೆಂದುಕೊಂಡಾರು? ಮತ್ತೆ ಕೇಳಕೂಡದು" ಎಂದು ಕಟ್ಟು ಮಾಡಿದ.

"ಯಾರು ನೋಡುತ್ತಾರೆ? ಅಲ್ಲಿ ನೋಡಿ, ಆ ಯುರೋಪಿಯನ್ ಆ ಚೆಟ್ಟೀಗಾರ ಜನ ಹಾಗೆ ಮಾಡೋಲ್ಲವೆ ?"

ಅವಳ ಕಂಕುಳಗಳಲ್ಲಿ ಕೈಗಳೆರಡನ್ನು ಇಟ್ಟು ಎತ್ತಿ ತೋರಿಸಿದ, ಆ ಸುರುಟು ಹೊಡೆಯುವ ಸಾಲ್ಗೊಂಡ ಶಿಪಾಯಿಗಳ ಬಗೆಯನ್ನು.

ಮಾನವ ಸ್ವಭಾವವನ್ನು ಬಲ್ಲ ಹರಿದಾಸ-"........ಅಂಗನೆಯ ಕಂಕು

ಳಲಿ ಕೈಯಿಟ್ಟು ನಗಿಸುವುದು" ಎಂದಿದ್ದಾನೆ. ಆ ಸುರುಟಿನ ಪಟಾಕಿ ಶಬ ದಲ್ಲಿ ಇವಳ ಅಲೆಯಲೆಯಾದ ನಗು ಅಣಗಿಹೋಯಿತು.

ಪಾಪದ ಮೊದಲ ಅರಿವು ನಮ್ಮ ಮೂಲ ಮಾತಾ-ಪಿತೃಗಳಿಗೆ, ಆ ತಿನ್ನ ಕೂಡದೆಂದು ನಿಷೇಧವಾಗಿದ್ದ ಹಣ್ಣನ್ನು ಸೈತಾನ ತಿನ್ನಿಸಿದನಂತರ ಆಯಿ ತೆಂದು ಕ್ರಿಶ್ಚಿಯನ್ ಬೈಬಲು ಹೇಳಿದೆ. ಅದರ ವಾಸ್ತವಾಂಶ ಲೋಕಾನು ಭವದಿಂದ ಕೂಡಿದುದು. ಕಂಕುಳಲ್ಲಿ ಕೈಯಿಟ್ಟು ಎತ್ತಿದಾಗ ತೆರೆದ ತೂಬಿನಲ್ಲಿ ನುಗ್ಗುವ ಜಲರಭಸದಂತೆ ಆಶೆ ಉದ್ವೇಗ ಉಕ್ಕಿದವು ಇಬ್ಬರ ಮನಸ್ಸಿನಲ್ಲೂ. ಹುಡುಗಿ ಆಗ ಬೆವತಳು-ಮುಖ ಕೆಂಪಗಾಯಿತು. ಇವನಿಗೆ ಅಸಾಧಾರಣ ಭಯವಾಯಿತು. ನಾಲಗೆ ಒಣಗಿತು. ಕೊಂಚ ಹೊತ್ತಾದಮೇಲೆ:

"ಏನಮ್ಮ ನೀನು, ನನ್ನೊಂದಿಗೆ ಹೀಗೆಲ್ಲ ಆಡಬಾರದು!"

ಹುಡುಗಿ ಇವನನ್ನೇ ನೋಡಿ, "ನನಗೆ ಹಾಗೆ ಕರೆಯಬೇಡಿ ಗುರು ಗಳೆ," ಎಂದಳು.

ಬೆದರಿ ಈತ, "ಮತ್ತೆ ಏನೆಂದು ಕರೆಯಬೇಕು?" ಎಂದ.

"ಸಮ್ಮನೆ ಕರೀರಿ; ವೇಣೂ ಅನ್ನಿ. ಅದೇ ಹಿತವಾಗಿರುತ್ತೆ."

ತನಗೇನೊ ಗ್ರಹಚಾರ ಎಂದುಕೊಂಡ. ಗ್ರಹಚಾರ ಒಳ್ಳೆಯದಾದರೂ ಆಗಬಹುದು, ಕೆಟ್ಟದ್ದಾದರೂ ಆಗಬಹುದು!

ಆದರೆ ಮನಸ್ಸಿನ ಆಶೆ ಕ್ಷಯಿಸಲಿಲ್ಲ. ಕಳ್ಳತನದಲ್ಲಿ ವೃದ್ಧಿಯಾಗಿರ ಬೇಕು.

ವಾಪಸು ಬಂದರಂತೆ. ಬರುವಾಗ ಇಬ್ಬರೂ ಸುಮ್ಮನಿದ್ದರು. ಮಾತ ನಾಡದೆ ಒಬ್ಬರ ಕಡೆಗೊಬ್ಬರು ನೋಡದೆ ಇದ್ದರು. ದಾರಿಯಲ್ಲಿ ಇಳಿದು ಹೋಗಿದ್ದ ಮಡ್ಡಿ ಗೋಪಾಳ ಹತ್ತಿ, ಎರಡು ಕಾಗದದ ಕಟ್ಟನ್ನು ಬಿಚ್ಚಿದ.

"ಏನೋ ಅದು?" ದೇವನಾಥ ಕೇಳಿದ.

" ಟಿಫಿನ್ ಮೇಷ್ಟ್ರೆ! ಟಿಫಿನ್."

" ಏನಿದು ಹೀಗಿದೆ ?"

" ಇದು ಕೌನ್ಸ್‌ಟೆಂಗ್, ಇದು ಹ್ಯಾಮ್. ನನ್ನ ಸಿಸ್ಟರಿಗೂ ನಿಮಗೂ ತಂದೆ!"

ಹುಡುಗಿ " ಇಳಿ, ಗಾಡಿಬಿಟ್ಟು!" ಎಂದಳು.

" ನಾನು ಇಳಿಯೋಲ್ಲ."

ನೂಕಿದಳು. ಅಳ ತೊಡಗಿದ. ಹದಿನೆಂಟು ವರ್ಷದ ಕೂಸು. " ಬಿಸಾಕು ಅದನ್ನ ! ಹಾಳಾದವನೆ! " ಎಂದಳು ಅಸಹ್ಯದಿಂದ. "ಊಟ ಮಾಡಿ ತಿಂತೇನೂ ಊಂ ! ಬಿಸಾಕೊಕೇನು ತಂದಿರೋದು ?"

ರೋಸಿ ತಲೆಯಮೇಲೆ ಕೈ ಹೊತ್ತು ಕೂತುಬಿಟ್ಟಳು. ಇವರಿಗೆ ಕಾಣು ವಂತೆ ಆತ ಅದನ್ನು ಕಚ್ಚಿ ತಿನ್ನ ತೊಡಗಿದ.

ಮುಟ್ಠಾಳನಾಗಿದ್ದ ಮೇಷ್ಟರು ಕಡು ಬೆಪ್ಪನಾಗಿ, ಈ ವಿಜಾತಿ ವರ್ತನೆ ನೋಡುತ್ತ, ಹಿಂದೆ ಹುಡುಗಿ ನಡೆಸಿದ ವಿಜಾತಿ ವರ್ತನೆ ನೆನೆಯುತ್ತ ಗಾಡಿ ಯಲ್ಲಿ ಕೂತಿದ್ದ ಮಾತ್ರ.

ಸಿಟಿಗೆ ಬಂದರು. ಇವನು ತನ್ನ ಪಾಠಶಾಲೆಯ ಹಾದಿ ಬರಲು ಅಲ್ಲಿಳಿದ. ಅವರು ಮುಂದೆ ಹೋದರು.

ಮನೆಯಲ್ಲಿ ಕುಳಿತು ಆ ದಿನ ನಡೆದುದೆಲ್ಲವನ್ನೂ ಯೋಚಿಸಿಕೊಂಡ. ಭಯಮಿಶ್ರವಾದ ಸುಖವಾಗುತ್ತಿತ್ತು. ಅದನ್ನು ಮನಸ್ಸಿಗೆ ಖಚಿತವಾಗಿ ಹೇಳಿ ಕೊಳ್ಳಲಾರ. ಅದರೆ ಆ ಸುಖ, ಆಸ್ಪರ್ಶ ಸುಖ, ಅದು ಕೆರಳಿಸಿದ ಉದ್ವೇಗ ಸುಖ, ಒಮ್ಮೊಮ್ಮೆ ಬೆಳಕಿನ ಬಿಂಬ ಅಲೆಗಳ ದೆಶೆಯಿಂದ ನೀರಿನಲ್ಲಿ ದೊಡ್ಡದು ಕಿರಿದು ಆಗುವಂತೆ, ಆ ಮನಸ್ಸಿನ ಭಾವತರಂಗಳಿಂದ ದೊಡ್ಡದೂ ಕಿರಿದೂ ಆಗಿ ನರ್ತಿಸುತ್ತಿತ್ತು.

ಇವನಿಂದ ಏನೊಂದೂ ಉತ್ತೇಜನವಿಲ್ಲದೆ ಅವಳಾರೀತಿ ವರ್ತಿಸಿದಳೆಂದು ನನ್ನೊಂದಿಗೆ ಹೇಳಿದ. ನಾನದನ್ನು ನಂಬಲಿಲ್ಲ.

" ಸರಿ, ಮುಂದೆ ಹೇಳಿ. " ಎಂದೆ.

ಮಧ್ಯಾಹ್ನ ಅವರ ಮನೆಗೆ ಪಾಠಕ್ಕೆ ಹೋಗಲಿಲ್ಲ. ಹೋಗುವ ಧೈರ್ಯವಿರಲಿಲ್ಲ.

ಸಂಜೆಯಾಯಿತು. ಶಿಷ್ಯರಿಗೆ ಸಂಜೆಯ ಪಾಠವೂ ಆಯಿತು. ಇವತ್ತು ಮೇಷ್ಟರು ಏನೋ ಒಂದು ವಿಧವಾಗಿದ್ದಾರೆ; ಎಂದು ಹುಡುಗರಾಡಿಕೊಂಡ ಮಾತು ಇವನಿಗೂ ಕೇಳಿಸಿತಂತೆ.

ಕದ್ದು ತಿನ್ನುವ ಪದಾರ್ಥ ಬಲುರುಚಿಯಂತೆ.

ಈ ಕಳವಿನ ಮಾಲು ದೊರೆಯಬಹುದಾದಾಗ ಅದರ ವಿಚಾರ ಬಲು ಮಧುರವಾಗಿತ್ತು ಮನಸ್ಸಿಗೆ. ಆದರೆ ಕಳುವಿನ ಮಾಲು ! ಭೀತಿಯಿರವುದಿಲ್ಲವೆ ?

ಇಲ್ಲಿ ಬದುಕಿದ್ದೇನೆ; ಬಾಳಿದ್ದೇನೆ. ನಾಲ್ವರ ಸಹಾನುಭೂತಿಯಿಂದ ಜೀವನ ಕಲ್ಪಿಸಿಕೊಂಡಿದ್ದೇನೆ. ಮರ್ಯಾದೆಯಿಂದ ಬಾಳಿದ್ದೇನೆ. ಹೀಗಿರುವಾಗ, ಅಸ್ವತಂತ್ರನಾಗಿರುವಾಗ ಈ ಹುಡುಗಿ, ವಿಧವೆ, ಬ್ರಾಹ್ಮಣ ಹುಡುಗಿ—ಇದರ ಪರಿಣಾಮವೇನೋ ? ಎಂಬ ಭೀತಿಯೊಂದು ಕಡೆ. ಆ ಹುಡುಗಿಯೊಡನಾಡಿದ ಚೆಲ್ಲಾಟ ನೆನಪಿಗೆ ಬಂದಾಗ ಸುಖವಾಗುತ್ತಿದ್ದಿರಬೇಕು. ಆಶೆ ಬೆಳೆಯುತ್ತಿದ್ದಿರಬೇಕು ಅವಳು ಬ್ರಾಹ್ಮಣ ಹುಡುಗಿ; ತನ್ನನ್ನು, ಮೀನು ಹಿಡಿದ ಕುಲದವನನ್ನು ಮೋಹಿಸಿದಳು; ಅದೊಂದು ಪರಮ ಭಾಗ್ಯ. ತನ್ನ ಬಗ್ಗೆ ತನಗೇ ಅತಿ ಹೆಮ್ಮೆಯಾಗಿರಬೇಕು. ತನ್ನ ಯೋಗ್ಯತೆ ದೊಡ್ಡದು ! ಹೀಗೆಲ್ಲ ಭಾವ ಬೆಳೆದಿರಬೇಕು. ಆದರೆ ಮರುಕ್ಷಣದಲ್ಲಿ ಅತಿ ಭಯ. ಅವಳು ಬ್ರಾಹ್ಮಣ ಹೆಣ್ಣಾಗಿರುವುದೇ ಭೀತಿಗೆ ಕಾರಣ. ಆದರೆ ಇವರೇನು ತನಗಿಂತ ಮೇಲು ? ಆ ಹುಡುಗ ಹಸುವಿನ ನಾಲಗೆ-ಹಂದಿಯ ತೊಡೆ ತಿನ್ನಲಿಲ್ಲವೆ ? ಆದರೆ ಅದನ್ನು ಇಡೀ ಜಾತಿಗೆ ಅನ್ವಯಿಸುವ ಧೈರ್ಯ ಹೇಗೆ ? ಒಬ್ಬ ತಿಂದರೆ ಜಾತಿಗೆಲ್ಲಾ ಹಾನಿಯೆ ?

ಅವನ ಮಾತಿನಿಂದ ಆಗ ಅವನ ಮನಸ್ಸು ಅತಿ ಹೊಯ್ದಾಡುತ್ತಿದ್ದಿತೆಂದು ನನಗೆ ತಿಳಿದು ಬಂದಿತು. ಆದರೂ ಆ ಅವಿಚಾರಿ ಹೆಣ್ಣಿನ ಪ್ರಣಯ ಇವನ ತಲೆಗೊಂದು ಕಿರೀಟವೇ ಆಗಿದ್ದಿರಬೇಕು.

ಹುಡುಗಿ ಎರಡುಬಾರಿ ಹೇಳಿಕಳುಹಿಸಿದಳು. ಮೈಯಲ್ಲಿ ನೆಟ್ಟಗಿಲ್ಲ; ಇನ್ನು ಕೊಂಚ ದಿನ ಬಿಟ್ಟು ಬರುತ್ತೇನೆ, ಎಂದು ಹೇಳಿಕಳುಹಿಸಿದ.

ಅವಳು ಅಷ್ಟಕ್ಕೆ ಬಿಟ್ಟಳೆ? ಇವನಿಗೊಂದು ಕಾಗದವನ್ನು ಒಂದು ಹಾಳೆಯ ಮೇಲೆ ಬರೆದು ಮಡಿಸಿ ಕಳಿಸಿದಳು. ಸಾಯಂಕಾಲ ಪಾಠಕ್ಕೆ ಬರುತ್ತೇನೆ–ಇದಿಷ್ಟಿತ್ತು. ಇವನಿಗೆ ತನ್ನ ತಲೆ ಎಲ್ಲಿ ಹೋಗುವುದೊ, ಎನ್ನುವಷ್ಟು ಭಯವಾಯಿತು. ಬೇಡವೆಂದು ಹೇಳಿಕಳುಹಿಸಿಯಾನೆ? ಅದು ಯಾರ ಕೈಗಾದರೂ ಸಿಕ್ಕರೆ? ಹೆಂಗಸರೂ ಇವನಲ್ಲಿಗೆ ಪಾಠಕ್ಕೆ ಬರುತ್ತಿದ್ದರು. ಅದು ಹೊಸದಲ್ಲ. ಜನಗಳ ಕಣ್ಣಿಗೆ ಅದರಲ್ಲೇನು ಹೆಚ್ಚಿನ ಅರ್ಥ ಕಾಣಿಸ ಲಾರದು. ಆದರೆ ಈ ಸನ್ನಿವೇಶದಲ್ಲಿ ಇವನಿಗದೇ ಒಂದು ದೊಡ್ಡ ಅನನ್ವಯ. ಅವಳು ಬಂದಾಗ ಇಲ್ಲದೆ ಹೋದರೊ? ಆದರೆ ತಾನಾಗಿ ಬರುವುದು; ಕಳ್ಳ ತನದ ಮಾಲು ತಾನಾಗಿ ಬಂದರೆ?

ಅಂತೂ ಉಳಿದ. ಸಂಜೆ ಆಯಿತು. ಕಳವಳ ಹೆಚ್ಚಾಯಿತು. ಊಟಕ್ಕೆ ಹೋಗಲೇ ಇಲ್ಲ. ಹತ್ತಿರದ ಹೋಟೆಲಿನಲ್ಲಿ ಅಲ್ಪಾಹಾರ ಮಾಡಿದ. ಏನಾಗಿ ಬಿಡುತ್ತದೋ? ತನ್ನ ತಲೆಯಲ್ಲಿ ಹೋಗುತ್ತದೊ?

ಆದರೆ ಹುಡುಗಿಯ ಮಾನ? ಇವನ ಗಮನಕ್ಕೆ ಬಂದಂತೆ ಕಾಣಲಿಲ್ಲ.

ಹೊರಳಾಡಿಕೊಂಡು ಮಲಗಿದ್ದಾನೆ. ನಿದ್ದೆ ಬಾರದು. ಹೇಗೆ ಬಂದೀತು? ಹತ್ತು, ಹನ್ನೊಂದು, ಹನ್ನೊಂದೂಕಾಲು, ಹನ್ನೊಂದೂವರೆ, ಹನ್ನೊಂದೂ ಮುಕ್ಕಾಲು, ಹನ್ನೆರಡು ಆಯಿತು. ಸ್ವಲ್ಪ ನಿದ್ದೆಯ ಜೊಂಪು ಬಂದಿತು. ಕದ ಮೆಲ್ಲನೆ ಎಲ್ಲಿಯೊ ಮುಟ್ಟಿದಷ್ಟು ಶಬ್ದ. ಬೆಚ್ಚಿಬಿದ್ದ. ಮನಸ್ಸಿನ ಬೆಂಕಿ ಇನ್ನು ನಿಗಿನಿಗಿ ಕೆಂಡವಾಗಿಯೆ ಇತ್ತು. ನಿದ್ದೆಯ ಆವರಣ ಬೂದಿಯ ತೆಳುವು ಪೊರೆಯಂತಿತ್ತು, ಅಷ್ಟೆ. ಅದು ಹಾರುವುದು ಏನು ಕಷ್ಟ! ಬರಿಯ ಕಾವಿಗೆ ಒಂದೊಂದು ವೇಳೆ ಹಾರುವುದು.

ಎಚ್ಚರವಾಗಿ ಹೋಯಿತು. ದೀಪ ಹಚ್ಚಲಿಲ್ಲ. ಬಾಗಿಲು ಮೆಲ್ಲನೆ ತೆರೆದ. ಇಬ್ಬರು ನಿಂತಿದ್ದಾರೆ; ಬೀದಿಯ ಬೆಳಕಿನಲ್ಲಿ ಕಾಣಿಸುತ್ತದೆ. ವೇಣು! ಗೋಪಾಳ! ಸ್ತಬ್ಧನಾಗಿ ಹೋದ. ಹೆಂಗಸಿನ ಸಾಹಸ! ವೇಣು ಮಾತ ನಾಡದೆ ಒಳಕ್ಕೆ ಹೋದಳು. ಹೋಗುತ್ತ, ಗೋಪಾಳನಿಗೆ, "ನೀನು ಇಲ್ಲಿ ವರಾಂಡದಲ್ಲಿ ಕೂತಿರು", ಎಂದು ಪಿಸುಗುಟ್ಟಿದಳು. "ಚಳಿ-ನಾನು ಬರ್ತೀನಿ ಒಳಗೆ; ನೀವು ಮಾತ್ರ ಬೆಚ್ಚಗೆ ಒಳಗೆ ಇರಿ; ನಾನು ಇಲ್ಲಿ ನಡಗ್ತಾ ಕೂತಿರ್ತೀನಿ?"

"ಇವನನ್ನು ಯಾಕೆ ಕರಕೊಂಡು ಬಂದೆ?" ಇವನ ಮನಸ್ಸು ಹೇಳಿದುದನ್ನು ಬಾಯಿ ಕೇಳಿತು.

"ಒಬ್ಬಳೆ ಹೇಗೆ ಬರಲಿ? ಸಿನೀಮಾಕ್ಕೆ ಹೋಗ್ತೀವಿ ಅಂತ ಹೇಳಿ ಬಂದ್ವು. ನಾನು ಬರ್ತೀನಿ ಅಂತ ಬರೆದಿದ್ರೂ, ಜವಾಬೇ ಬರೀಬಾರ್ದ ಗುರುಗಳೆ? ಇವನು ಅಮ್ಮನಿಗೆ ಹೇಳೋಲ್ಲ. ಅಪನು, ಅದು ತಿಂದದ್ದು ನಾನೂ ಹೇಳೋಲ್ಲ"; "ಅಲ್ವೇನೊ?"

"ಹೂಂ, ಹೂಂ, ಕಾಸು ಕೊಡು ಇವಾಗ."

"ಮನೆಗೆ ಹೋಗೋಣ, ಕೊಡ್ತೀನಿ."

"ಕೊಡಬೇಕು, ಮರೀಬಾರ್ದು." ಅವರು ಬಾಗಿಲು ಹಾಕಿಕೊಳ್ಳುತ್ತಿದ್ದರು.

"ನಾನೂ ಬರ್ತೀನೇ" ಎಂದು ನೂಕಿಕೊಂಡು ಒಳಕ್ಕೆ ಬಂದ.

ಕತ್ತಲು-ಕದ ಮುಚ್ಚಿತ್ತು. ಕಿಟಕಿಗಳು ಮುಚ್ಚಿದ್ದವು. ಗೋಪಾಳ ತಡವರಿಸುತ್ತ, "ನನಗೆ ಸಿಕ್ತಪ್ಪ ಹಾಸಿಗೆ! ಬೆಚ್ಚಗೆ ಮಲಕ್ಕೋತೀನಿ," ಎಂದ.

ಮಾತು ಕೇಳಿ ಒಬ್ಬರನ್ನೊಬ್ಬರು ನೋಡಿದರು. ಆದರೆ ಮುಖ ಕಾಣಿಸೀತೆ?

ಬೆನ್ನಮೇಲೆ ಕೈ ಇಟ್ಟುಕೊಂಡು ಆ ಕತ್ತಲಲ್ಲಿ ಪರಸ್ಪರ ಅವಲಂಬನವಾಗಿ, ಉತ್ತೇಜಕವಾಗಿ, ಕೋಣೆಯ ಇನ್ನೊಂದು ಬಾಗಿಲು ತೆರೆದು ದೇವನಾಥ ವೇಣು ದೊಡ್ಡ ಹಾಲಿನೊಳಕ್ಕೆ ಹೋದರು.

ಸುಮಾರು ಎರಡು ಗಂಟೆಗೆ ದೇವನಾಥ ಗೋಪಾಳನನ್ನು ಎಬ್ಬಿಸಿದ. ಅವನು ಏಳಲಾರೆನೆಂದು ರೊಚ್ಚೆ ಮಾಡಿದರೂ ಬಿಡದೆ ಎಬ್ಬಿಸಿ, ತಾನೂ ಬಟ್ಟೆ ಹಾಕಿಕೊಂಡು ಹೋಗಿ ಅವರ ಮನೆಗೆ ಬಿಟ್ಟು, ಅವರ ತಾಯಿಗೆ-ತಾನೂ ಸಿನೀಮಾಕ್ಕೆ ಹೋಗಿದ್ದೆನೆಂದೂ, ಮನೆತನಕ ಕಳಿಸಲು ಬಂದೆನೆಂದೂ, ಹೇಳಿದ.

ಗೋಪಾಳ: "ಇಲ್ಲಮ್ಮ"—ಏನೋ ಹೇಳಬೇಕೆಂದಿದ್ದ. ಅಷ್ಟರಲ್ಲಿ ನಿಲ್ಲಿಸಿ, "ಕತ್ತೆ, ನನ್ನ ಜಿಗಟ್ಟೇಯ ?" ಎಂದು ಅಕ್ಕನನ್ನು ಹೊಡೆಯಹೋದ. ನಿದ್ದೆ ಗಣ್ಣಿನ ಹೆಂಗಸು ಇದನ್ನೆಲ್ಲ ಗಮನಿಸಿದಂತೆ ಕಾಣಲಿಲ್ಲ. ತೂಕಡಿಸುತ್ತ, "ಇಲ್ಲೆ ಮಲಗಿದ್ದು ಬೆಳಗ್ಗೆ ಹೋಗುವಿರಂತೆ", ಎಂದಳು.

ಅದೂ ಆಗಬಹುದಾಗಿತ್ತು. ಆದರೆ ನಿಲ್ಲದೆ ಹೊರಟುಬಂದ.

ಬೆಳಗ್ಗೆ ಬಹಳ ಯೋಚಿಸಿದ. ತಾನು ಬಹಳ ಕೆಟ್ಟಕೆಲಸ ಮಾಡಿದೆ ಎನ್ನಿಸಿರಬೇಕು. ತನ್ನ ಮರ್ಯಾದೆಯನ್ನು ಈ ಹುಡುಗಿ ಎಲ್ಲಿ ಕಳೆದುಬಿಡುತ್ತಾಳೊ? ಈ ಭಯ! ಮುಂದೇನು ವಿಪತ್ತು ಕಾದಿದೆಯೊ? ಈ ದುಗುಡ! ಏನು ಕೆಲಸ ಮಾಡಿಕೊಂಡೆ! ಕೈ ಹಿಸುಕಿಕೊಳ್ಳುವನು.

ಆದರೆ ಅನಾಯಾಸವಾಗಿ ದೊರಕಿದ-ಕೊಂಚ ಶ್ರಮದಿಂದ ಲಭ್ಯವಾದ ಹೆಣ್ಣು. ಮನಸ್ಸು ಅವಳ ಬಗ್ಗೆ ಎಲ್ಲ ಭಾವಿಸಿಕೊಂಡಿತು. ಮೈ ಪುಲಕವೇರಿತು. ಅಂತರಾಳದಲ್ಲಿ ತೃಪ್ತಿ, ಹೆಮ್ಮೆ. ಕೀಳು ಎಂದೆನಿಸಿಕೊಂಡವನಾದ ತಾನು ಸಾಧಿಸಿದ ಇದೊಂದು ವಿಜಯ! ಏನೇನೋ ಬಗೆದನು.

ಇದು ಹೀಗೆಯೇ ನಡೆಯಿತು. ತ್ವಕ್‌ಚಾಪಲ್ಯಕ್ಕೆ ಮನಸೋತು ಹೀಗೆ ನಡೆಸಿಕೊಂಡು ಬಂದ. ಹುಡುಗಿ ಕೇಳಿದಳು ಒಂದು ದಿನ-ಮದುವೆಯಾಗೋಣ, ಎಂದು. ಒತ್ತಾಯ ಮಾಡಿದಳು.

ಇವನು, ದುಡಿಮೆಗೆ ವಿಘ್ನ–ಜನರ ವಿರೋಧ ಬಹಳವಾದೀತು-ನಾವು ಬದುಕುವುದೇ ಕಷ್ಟವಾದೀತು–ಇತ್ಯಾದಿ ನೆಪ ಹೇಳಿದನು.

ಹುಡುಗಿ ತನಗೆ ತಿಳಿದಂತೆ ಯೋಚನೆ ಮಾಡಿ ಒಂದು ಉಪಾಯ ಸೂಚಿಸಿ ಕಾಗದ ಬರೆದಳು.

ಈತ ಆ ಕಾಗದ ಇಟ್ಟುಕೊಂಡಿದ್ದ. ಹೇಳುತ್ತಿದ್ದವನು ಒಳಕ್ಕೆ ಹೋಗಿ ತಂದು ತೋರಿಸಿದ. ಅದೊಂದು ಡ್ರಾಯಿಂಗ್ ಪುಸ್ತಕದ ಹಾಳೆಯ ಮೇಲೆ ಕನ್ನಡದಲ್ಲಿ ದುಂಡಾದ ಅಕ್ಷರಗಳಿಂದ ಬರೆದ ಕಾಗದ. ಕಾಗದದ ಅಂಚೆಲ್ಲ ಸುಟ್ಟು, ಕಪ್ಪು, ಕಂದು ಆಗಿ, ಅಲ್ಲಲ್ಲೆ ಕರುಕು ಹತ್ತಿದಂತಿತ್ತು.

ಆವಳ ಎಲ್ಲ ಕಾಗದಗಳನ್ನು ಆ ಮೇಲೆ ಬೆಂಕಿಯಲ್ಲಿ ಹಾಕಿ ಸುಟ್ಟನಂತೆ. ಅವು ಕಟ್ಟಿನ ಸಮೇತ ಸುಡುವಾಗ ಹೃದಯದ ಶೋಕ ತಾಳಲಾಗದೆ, ಬೆಂಕಿಯಲ್ಲಿ ಕೈಯಿಟ್ಟು ಇದನ್ನು ಎಳೆದುಕೊಂಡನಂತೆ. ಅದಕ್ಕೇ ಅದು ಹಾಗೆ ಹೊಗೆ ಕರುಕುಗಳಿಂದ ಕೂಡಿ ಅಲ್ಲಲ್ಲಿ ಸುಟ್ಟು ಹೋಗಿರುವುದು, ಎಂದು ಇವನ ಸಬೂಬು. ಅದೇನೇ ಇರಲಿ. ಆ ಕಾಗದ ಹುಡುಗಿಯರು ಬರೆಯುವ ಕಾಗದದಂತೆ ಇತ್ತು. ಅದರಲ್ಲಿ ಪ್ರೇಮ ಇತ್ಯಾದಿಗಳ ಬಗ್ಗೆ ಏನೇನೊ ಹೇಳಿ ಕೊನೆಗೊಂದು ಸಲಹೆಯಿತ್ತು.

"ನೀವು ಯಾವುದಕ್ಕು ಚಿಂತಿಸಬೇಕಾಗಿಲ್ಲ; ನನ್ನ ಹತ್ತಿರ ಕೆಂಪಿನ ಬಳೆಗಳಿವೆ, ವಜ್ರದ ಓಲೆಯಿದೆ. ನಾಲ್ಕೆಳೆಯ ಚಿನ್ನದ ಸರವಿದೆ. ಹದಿನಾರು ಸವರ್ನ ತೂಕದ ಚಿನ್ನದ ಡಾಬಿದೆ. ಇವೆಲ್ಲ ಸೇರಿಸಿದರೆ ಎರಡು ಸಾವಿರದ ಮೇಲಾಗುತ್ತೆ. ನಾವು ಈ ಊರು ಬಿಟ್ಟು ಇನ್ನೆಲ್ಲಿಗಾದರೂ ಹೋಗಿಬಿಡೋಣ. ನಾವು ಅಲ್ಲಿ ಪ್ರಾರಂಭದಲ್ಲಿ ಇದರಲ್ಲೆ ಖರ್ಚು ಮಾಡೋಣ. ಆಮೇಲೆ ನೀವು ಪಾಠಗಳನ್ನು ಇಟ್ಟುಕೊಳ್ಳಬಹುದು. ನಾನೂ ಇದ್ದೇನೆ. ನಾನೂ ಜೊತೆಗೆ ಹೆಣ್ಣು ಹುಡುಗರಿಗೆ ಪಾಠ ಕಲಿಸುತ್ತೇನೆ. ನನ್ನನ್ನು ಮದುವೆ ಮಾಡಿಕೊಳ್ಳಿ. ಆರ್ಯ ಸಮಾಜವಿದೆ. ನನ್ನ ಕೈ ಬಿಡಬೇಡಿ. ನಿಮ್ಮನ್ನು ಬಿಟ್ಟು ನಾನು ಜೀವ ಇಟ್ಟುಕೊಳ್ಳಲಾರೆ." ಮುಂದೆ ಇನ್ನೇನೊ ಇತ್ತು. ಎದೆಯನ್ನು ಸುಟ್ಟರೆ ಆಗುವಂತಹ ನೋವಾಯಿತು ನನಗೆ ಆ ಕಾಗದ ಓದಿ.

ಮನೆ ಅಂಗಡಿ ಕಟ್ಟಿದವನಿಗೆ ಊರು ಬಿಟ್ಟು ಹೊರಡುವ ಪ್ರಶ್ನೆ ಏಳುವುದಿಲ್ಲ. ಇಪ್ಪತ್ತು ಸಾವಿರ ರೂಪಾಯಿ ಎರಡು ಸಾವಿರ ರೂಪಾಯಿಗಿಂತ ಹೆಚ್ಚು. ಅವಳನ್ನು ಕಟ್ಟಿಕೊಂಡು ಓಡಿಹೋದರೆ ಲೋಕ ಸುಮ್ಮನೆ ಬಿಟ್ಟೀತೆ? ಗಂಡಸತ್ತ ಮುಂಡೆಯನ್ನ ಮದುವೆಯಾಗಲಾದೀತೆ? ಜನ ಏನೆಂದಾರು? ತಾನೂ ಮತ್ಸ್ಯಬ್ರಾಹ್ಮಣ ! ಆದದ್ದಾಗಿ ಹೋಯಿತು. ಮುಂದೆ ಎಚ್ಚರದಿಂದಿದ್ದರಾಯಿತು, ಎಂದು ಈತ ಯೋಚಿಸಿರಬೇಕು.

ಅವಳ ಕಾಗದಕ್ಕೆ ಜವಾಬು ಕೊಡಲಿಲ್ಲವಂತೆ. ಕೊನೆಗೆ ಹೆದರಿ ಎರಡು ತಿಂಗಳು ಊರು ಬಿಟ್ಟ, ಎಂದ. ಪೂನಾ ಕಡೆಗೆ ಕಛೇರಿ ನೆಪದಲ್ಲಿ ಹೋಗಿದ್ದನಂತೆ.

ಇವನಿಗೆ ಯಾವಾಗಲೂ ತನ್ನದೇ ಯೋಚನೆ. ತಾನು ಉಳಿಯಬೇಕು. ಅದು ಅವನು ನನ್ನ ಮುಂದೆ ಹೇಳುತ್ತಿದ್ದ ನೆಪಗಳಿಂದ ಸ್ಪಷ್ಟವಿತ್ತು. ಆದರೆ ದೈವಗತಿ ?

ಊರಿಗೆ ಬಾರದೇ ಇರುವುದಕ್ಕಾದೀತೆ-ಮಳಿಗೆ ಮನೆ ಬಿಟ್ಟು ? ಇವನ ರೂಮಿನೊಳಕ್ಕೆ ಬಾಗಿಲ ಸಂದಿನಿಂದ ಟಪಾಲಿನವನು ಎಸೆದು ಹೋಗಿದ್ದ ಮೂರು ನಾಲ್ಕು ಕಾಗದಗಳು ಧೂಳಿನಲ್ಲಿ ಬಿದ್ದಿದ್ದವು. ಸಧ್ಯ ಯಾರ ಕೈಗಾಗಾದರೂ ಸಿಕ್ಕಿದ್ದರೆ ? ಅವುಗಳಲ್ಲೆಲ್ಲ ಇದ್ದುದು ಅದೇ ಕಥೆ; ಅದೇ ಹಾಡು. ಶನಿ ತೊಲಗೀತೆಂದರೆ ತೊಲಗುವುದಿಲ್ಲವಲ್ಲ! ಎನ್ನಿಸಿರಬೇಕು. ಪ್ರಾಣ ಕಳೆದುಕೊಳ್ಳುತ್ತೇನೆ-ವಿಷ ತಿನ್ನುತ್ತೇನೆ, ಎಂಬ ಹೆದರಿಕೆ. 'ಹೊರಗಾಗಿರಲಿಲ್ಲ'ವಂತೆ-ಹಾಗೆಂದರೇನು ? ಯೋಚಿಸಿದ. ಭಯಂಕರ ಸತ್ಯ ಒನ್ಮೆಲೇ ಹೊಳೆಯಿತು. ನಡುಗಿಬಿಟ್ಟ. ಆದರೆ ಇವನ ಗಂಡಸು ಗುಣ, 'ಅವಳ ಪಾಡು', ಎಂದಿರಬೇಕು.

ಆ ದಿನ ಮಧ್ಯಾಹ್ನ ರೂಮಿನಲ್ಲಿ ಮಲಗದೆ-ಶೆಖೆ ಕಡಿಮೆ ಎಂದು, ಹಾಲಿನಲ್ಲಿ ಮಲಗಿದ್ದಾನೆ. ರಾತ್ರಿ ರೈಲು ಪ್ರಯಾಣದಲ್ಲಿ ನಿದ್ದೆ ಬಂದಿರಲಿಲ್ಲ. ಯಾವಳೊ ಆಸ್ಪತ್ರೆಯ 'ಆಯ', "ನಿಮ್ಮನ್ನು ಯಾರೊ ಕರೀತಾರೆ ಆಸ್ಪತ್ರೀಲಿ;

ಅವರಿಗೆ ಸಖತ್ ಕಾಯಿಲೆ; ಉಳಿಯೊ ಹಾಂಗಿಲ್ಲ. ಇವತ್ತು ಸಿಕ್ಕಿದಿರಿ ; ನಾನು ಎಷ್ಟೊ ದಿನ ನಿಮ್ಮ ಮನೆಗೆ ನೋಡ್ಕೊಂಡು ಹೋಗ್ತಿದ್ದೆ", ಎಂದಳು. ಇವನಿಗೆ ಗೊತ್ತಾಗಲಿಲ್ಲ. "ಯಾರವರು ? ಅವರ ಹೆಸರೇನು ? ಏನೆಂದು ಹೇಳಿಕಳಿಸಿದ್ದಾರೆ ? ಯಾಕೆ ಬರಬೇಕಂತೆ ?"

''ನಿಮ್ಮ ಹೆಸರು ದ್ಯಾವಪ್ಪನವರು, ಹೌದೊ ?''

''ದೇವನಾಥ!''–ಇದು ಸಂಗೀತ ವಿದ್ವಾಂಸನಾದಾಗಿನ ಹೆಸರು. ಹಿಂದಿನ ವಾಸನೆ ನೆನಪಿಗೆ ಬಂದು ಅಳುಕಿತು ಮನ.

''ಏನೊ? ನಿಮ್ಮ ಮನೆ ಹೆಂಗಸರಂತೆ–ವೇಣಕ್ಕನಂತೆ ಅವರ ಹೆಸರು?''

''ನಮ್ಮನೆ ಹೆಂಗಸರಾರೂ ಇಲ್ಲ. ಅವರಿಗೆ ಬರೋಕಾಗೊಲ್ಲವಂತೆ; ಇನ್ನು ನಾಳೆ ನಾಡಿದ್ದರಲ್ಲಿ ನೋಡೋಣ, ಅಂತ ಹೇಳು''. ಅವಳಿಗೆ ದುಡ್ಡು ಕೊಟ್ಟನಂತೆ.

''ಎಂತಾವನಯ್ಯ ನೀನು ? ನಿನಗಾಗಿ ಅಂತಾ ಪಾಡುಪಟ್ಟು ಆ ಹುಡುಗಿ ಇಸ ಕುಡುದು ಸಾಯಿತಾ ಬಿದ್ದವಳೆ ; ಈಗೋ ಆಗೋ ಹೋಗೋ ಹಂಗೈತೆ ಜೀವ! ಕಣಿ ಏಳ್ತೀಯ ನನ್ನ ಹತ್ರ ? ನಾಕಂಡಿದೀನಿ, ಬಾ ನಿನ್ನ-ರಂಪ ಆದೀತು !'' ಎಂದು ದುಡ್ಡು ಬಿಸ್ಹಾಕಿದಳು.

ಅವಳಿಗೆ ಹೆದರಿಕೊಂಡು, ''ಬಟ್ಟೆ ಹಾಕಿಕೊಂಡು ಹೊರಟೆ'', ಎಂದ.

''ಆಸ್ಪತ್ರೆಗೆ ಆಯ ಕರೆದುಕೊಂಡು ಹೋದ್ಲು. ಹೆಂಗಸರ ವಾರ್ಡಿನಲ್ಲಿ ಪರದೆ ಸ್ಟ್ಯಾಂಡ್ ಹಾಕಿ ಮಂಚ ಮರೆ ಮಾಡಿದ್ರು. ನರ್ಸ್–'ಇವರೇನೊ ?' ಎಂದಳು. ಇಡೀ ಹೆಂಗಸು ಜಾತಿಯೆಲ್ಲ ನನ್ನ ಮೇಲೆ ಕ್ರೋಧ ಕಾರುತ್ತಿರುವಂತೆ ಕಂಡಿತು. ಅಲ್ಲಿಗೆ ಹೋದೆ. 'ಅಂತೂ ಕಡೆಗೆ ಬಂದ್ರಲ್ಲ!' ಎಂಬ ಕ್ಷೀಣ ದನಿ ಕೇಳಿಸಿತು. ನನಗೆ ಗುರುತು ಎಳ್ಳಷ್ಟೂ ಸಿಕ್ಕಲಿಲ್ಲ. ಅದು ಬರೀ ಅಸ್ತಿ ಪಂಜರ. ಹತ್ತಿರ ಬರಲು ಸನ್ನೆ ಮಾಡಿದಂತಾಯಿತು. ಸಣ್ಣಗೆ ಉಸಿರು. ಆಗಿನ ರೂಪ ನನ್ನಿಂದ ವಿವರಿಸಲಿಕ್ಕಾಗದು. ತಲೆ ಎತ್ತ ಕಡೆಗೊ, ಕೈಗಳು

ಎತ್ತ ಕಡೆಗೂ ಆಗಿದೆ. ಮೈಚರ್ಮ ಪರೆ ಬಂದು ಹೋಗಿದೆ. ಹತ್ತಿರ ಬಾ, ಎಂದು ಮತ್ತೆ ಸನ್ನೆ ಮಾಡಿದಳು. ನನ್ನ ಮನಃಸ್ಥಿತಿ ಹೇಗಿರಬಹುದು? ಊಹಿಸಿಕೊಳ್ಳಿ,'' ಎಂದ.

"ಊಹಿಸಿಕೊಂಡಿದ್ದೇನೆ, ಮುಂದೆ ಹೇಳಿ", ಎಂದೆ.

''ನನಗೆ ಅಳು ಬಂತು.''

''ಆಗ ಅಳು ಬಂತೆ?''

''ಇದೇನು ಸ್ವಾಮಿ ಹೀಗೆ ಹೇಳುತ್ತೀರಿ? ನನಗಾದ ದುಃಖ ಭಗವಂತ ಬಲ್ಲ! 'ನೀವು ಮದುವೆ ಮಾಡಿಕೊಳ್ಳಲಿಲ್ಲ; ಇದಾಯಿತು!' ಎಂದಳು. ಹತ್ತಿರ ಬಾ, ಎನ್ನುತ್ತಾಳೆ. ಇನ್ನೆಷ್ಟು ಹತ್ತಿರ ಹೋಗುವುದು? ಜನ ಏನೆಂದುಕೊಂಡಾರು ನನ್ನ ವಿಚಾರ? 'ಕೈ ಹಿಡಿದುಕೊ', ಎನ್ನುತ್ತಾಳೆ. ಕೈ ಒಣಗಿದ ಕಟ್ಟಿಗೆ. ನನ್ನನ್ನೇ ನಟ್ಟ ನೋಟದಲ್ಲಿ ನೋಡುತ್ತಿದ್ದಳು. ದೇಹ, ಜೀವ ತಣ್ಣಗಾಗುತ್ತ ಬಂದಿದ್ದರೂ ಕಣ್ಣು ನೆನೆಸಿಕೊಂಡರೆ ಭಯವೆನಿಸುತ್ತದೆ. ಎರಡೂ ಕೈ ಚಾಚಿದಳು. ಹೇಳಲು ನಾಚಿಕೆಯಾಗುತ್ತದೆ–ಅವಳಿಗೆ ಆಗಲೂ ಆಸೆ ನನ್ನನ್ನು ಅಪ್ಪಿಕೊಳ್ಳಬೇಕೆಂದು. ಆದರೆ ನನ್ನ ಮನಸ್ಸು ಹಿಂಜರಿಯಿತು. ಸುಮ್ಮನಿದ್ದೆ. ಯಾವುದೊ ಶಕ್ತಿ ನೋಡಿ! ನನ್ನನ್ನು ಇಕ್ಕಳದಿಂದ ಒತ್ತಿ ಕಡಿದಂತಾಯಿತು ಅವಳ ಕೈ ಬೆರಳುಗಳಿಂದ ನನ್ನ ಬೆರಳನ್ನು ಹಿಡಿದು ಒತ್ತಿ ಎಳೆದುಕೊಂಡಾಗ. ಅವಳ ಮೈ–ಅದು ಎಲುಬಿನ ಗೂಡು. ಆದರೂ ಅದರಲ್ಲಿ ಆಶೆ ಅಷ್ಟು ಉಗ್ರವಾಗಿತ್ತು! ಮೂಳೆಯ ರಾಶಿಯ ಮೇಲೆ ಒರಗಿದಂತಾಯಿತು. ಅವಳ ಕೈಯಲ್ಲೊಂದು ಉಂಗುರ ಇತ್ತು. ಬೇಡ, ಬೇಡ, ಎಂದರೂ, ನನ್ನ ಕೈಗೆ ತೊಡಿಸಿ, 'ನಿನ್ನನ್ನು ಮದುವೆ ಮಾಡಿಕೊಂಡಿದ್ದೇನೆ', ಎಂದಳು. 'ಸಾಯುವ ಹೆಂಗಸು ಏನಾದರೂ ಹೇಳಿಕೊಳ್ಳಲಿ', ಎಂದಿದ್ದೆ. 'ನನ್ನನ್ನು ಮರೆಯಬಾರದು', ಎಂದು ಭಾಷೆ ತೆಗೆದುಕೊಂಡಳು. ಸರಿ, ಎಂದೆ. ಆ ಮೇಲೆ ಅಳುತಳುತ್ತ–'ಅಯ್ಯೊ, ನನಗೆ ಸಾಯೋಕೆ ಆಗುವುದಿಲ್ಲ; ಬದುಕಿಸಿಕೊ; ನಿನ್ನನ್ನು ಬಿಟ್ಟು ಹೋಗಲಾರೆ, ನನ್ನಂತೆ ನಿನ್ನನ್ನು ಯಾರು ಪ್ರೀತಿಸುತ್ತಾರೆ?'–ಏನೇನೋ ಒಂದಕ್ಕೊಂದು ಸಂಬಂಧವಿಲ್ಲದ ಮಾತು.

ಬಹಳ ಕಷ್ಟದಿಂದ ಒತ್ತಾಯಪಡಿಸಿ ಬಿಡಿಸಿಕೊಂಡು ಬಂದೆ. ನಾನು ಬಹು ವಾಗಲೂ ಕೈ ಹಾಸಿಗೆ ಆಚೆ ಚಾಚಿ ನನ್ನ ಕಡೆ ನೀಡಿದ್ದಳು. ಕಣ್ಣು ನೋಡಿ ದರೆ ಹೇಗೊ ಆಗುವಂತಿದ್ದವು. ಆಮೇಲೆ ನಾನು ಬಂದುಬಿಟ್ಟೆ. ಎರಡು ಮೂರು ದಿನ ಆದಮೇಲೆ ಅವಳು ಸತ್ತುಹೋದಳು. ಅವಳ ಜನ ಬಂದು ಮುಂದಿನ ಕಾರ್ಯ ನಡೆಸಿದರು.''

''ನೀವು ಹೋಗಿದ್ದಿರೊ?''

''ನಾನು ಹೇಗೆ ಹೋಗಲಿ?''

''ಉಂಗುರ ಏನು ಮಾಡಿದಿರಿ?''

''ಇಲ್ಲೆ ಎಲ್ಲೊ ಇದೆ; ಎಲ್ಲೂ ಹೋಗಿಲ್ಲ.''

''ಮುಗೀತೋ ಕಥೆ?''

''ಇಲ್ಲ ಸ್ವಾಮಿ, ಇನ್ನೂ ಇದೆ. ಅದನ್ನೆ ಹೇಳೋದಕ್ಕೆ ಇಷ್ಟೆಲ್ಲ ಪೀಠಿಕೆ.''

''ನಿಮ್ಮ ಕಥೇನೆ ಕೇಳ್ತಾ ಕೂತರೆ, ನನ್ನ ಕಥೆ ನಡೀಬೇಕಲ್ರೀ!''

''ಇಲ್ಲ ಸ್ವಾಮಿ, ಮುಗಿಸಿಬಿಟ್ಟೆ. ಈ ಕೊನೇದೆ ಮುಖ್ಯವಾದದ್ದು. ಹಿಂದೆ ನಡೆದದ್ದೆಲ್ಲ ಏನೊ ಋಣಾನುಸಂಬಂಧ–ನಡೆದುಹೋಯಿತು. ನಾನು ಯಾರು? ನನ್ನ ಊರ್ಯಾವುದು? ನನ್ನ ಜಾತಿಯಾವುದು? ...............

''ಯಾವುದು ನಿಮ್ಮ ಜಾತಿ?''

''ನಾವು ಬೆಸ್ತರು!''

''ಎಂಥದೊ ಬ್ರಾಹ್ಮಣರು ಎಂದ್ರಲ್ಲ್ರೀ?''

''ಹೌದು, ಸ್ವಾಮಿ! ಬೆಸ್ತರು ಮತ್ಸ್ಯೇಂದ್ರ ಬ್ರಾಹ್ಮಣರು. ಪುಸ್ತಕ ಅಚ್ಚು ಆಗಿದಾವೆ. ನಿಮಗೆ ನೋಡಿಸ್ತೀನಿ. ಅಖಿಲ ಭಾರತ ಮತ್ಸ್ಯ ಬ್ರಾಹ್ಮಣ ಸಮ್ಮೇಳನದವರು ಅಚ್ಚು ಹಾಕಿಸಿ ಎಲ್ಲಾರಿಗೂ ಕಳಿಸಿ ಛಾಲೆಂಜ್ ಮಾಡಿ

ದ್ದಾರೆ. ಕರೀರಿ ಇವರನ್ನ! ಈ ಬ್ರಾಹ್ಮಣರು ಎಂತ ಹೇಳಿಕೊಳ್ಳೋರನ್ನ! ನಮ್ಮ ಸವಾಲ್-ಬಹಿರಂಗ ಸವಾಲ್‌ಗೆ ಜವಾಬ್ ಕೊಟ್ಟಿದಾರೇನೊ?"

"ಅವರನ್ನು ಕರೆದು, ನಿಮಗೆ ಜವಾಬು ಹೇಳ್ಸೋಕೆ ನಾ ಬಂದಿಲ್ಲ. ನೀವು ಯಾರನ್ನು ಕರೀತೀರೊ ಈಗ, ಅವರಿಗೆ ಇದಕ್ಕಿಂತ ಬೇರೆ ಉತ್ತಮವಾದ ಕೆಲಸ ಇದ್ದೀತು!"

"ಏನು ಹೇಳ್ತಿದ್ದೆ ನಾನು?"

"ಏನೊ ಹೇಳ್ತಿದ್ರಿ."

"ಹೂ ನೆನಪಾಯಿತು! ಅವ್ರ ಮನೇಗೆ ನಾನು ಹೋಗ್ಲಿಲ್ಲ."

"ಏನು ಕೆಲಸ ಅಂತ ಹೋಗಬೇಕು? ಅದಾಯ್ತು, ಮುಂದೇನು ಹೇಳಿ."

"ನೋಡಿ, ಅವಳು ಸತ್ತ ಸ್ವಲ್ಪ ದಿವಸದ ತನಕ ಏನೂ ಇರಲಿಲ್ಲ. ಆ ಮೇಲೆ ನನಗೆ ಕನಸುಗಳು ಬೀಳತೊಡಗಿದವು. ಒಂದೊಂದೂ ಒಂದೊಂದು ಭಯಂಕರ ಕನಸು. ಅವಳೆ ಕನಸಿನಲ್ಲಿ ಬರುತ್ತಿದ್ದಳು. ನನ್ನ ಹಿಡಿಕೊಳ್ಳೋಕೆ ಆಸ್ಪತ್ರೇಲಿ ಅಸಹ್ಯ ಪಟ್ಟುಕೊಳ್ಳುತ್ತಿದ್ದೆಯಲ್ಲ-ಈಗ ನಾನು ಬಂದಿದ್ದೇನೆ ನಿನ್ನ ಹಿಡಿದುಕೊಳ್ಳೋದಕ್ಕೆ, ಅನ್ನುವಳು. ರೂಪ ಬಹಳ ಭಯಂಕರ-ಆ ಆಸ್ಪತ್ರೇಲಿ ನೋಡಿದಂತೆ ಆ ಕಣ್ಣುಗಳು ಉರಿ, ಕ್ರೋಧ, ತೃಪ್ತಿ ಆಗದ ಆಶೆ ಎಲ್ಲದರಿಂದ ಕೂಡಿ ಭಯಂಕರವಾಗಿರುತ್ತಿದ್ದವು. ಕಣ್ಣಿಗೆ ನಿದ್ದೆ ಹತ್ತಿತೊ, ಇಲ್ಲವೊ, ಬಂದು ಬಿಡುತ್ತಿತ್ತು ಆ ಭೂತದ ರೂಪ, ಚಕ್ಕಳವೆಲ್ಲ, ಎಲುಬಿನ ಗೂಡು, ಉರಿಕಾರುವ ಕಣ್ಣು. ಎಲುಬಿನ ತುಂಡುಗಳಂತಿದ್ದ ಕೈಗಳಿಂದ ಕತ್ತು ಹಿಸುಕಿದಂತಾಗುತ್ತಿತ್ತು. ಚಿಟ್ಟನೆ ಚೀರಿ ಎದ್ದುಬಿಡುತ್ತಿದ್ದೆ. ಇನ್ನೊಂದೊಂದು ವೇಳೆ ಸೌಮ್ಯವೇಷ-ಆಕಾರ ಇರುತ್ತಿತ್ತು. 'ನೀನು ನನಗೆ ಹಾಗೆ ಮೋಸ ಮಾಡಬಹುದೇ?' ಎನ್ನುವಳು. ಆದರೆ ಅವಳಿಗೆ ಜವಾಬು ಹೇಳಲು ನನಗೆ ಮಾತೆ ಇರುತ್ತಿರಲಿಲ್ಲ. ಇನ್ನೊಂದೊಂದು ದಿನ, 'ನಾನು ಮದುವೆಯ

ಹೆಣ್ಣು !' ಎನ್ನುತ್ತ ಸಿಂಗರಿಸಿಕೊಂಡಂತೆ ತೋರುವಳು. ತಲೆ ಬಾಚಿ, ಹೂ ಮುಡಿದು, ಕುಂಕುಮ ಇಟ್ಟು, ಅವಳ ಒಡವೆ ತೊಟ್ಟು, ಅತಿ ಚೆಲುವು ಮೋಹದಿಂದ ಬಂದು ನನ್ನೊಂದಿಗೆ ಕೂಡುವಳು. ನಾವಿಬ್ಬರೂ ಕ್ರೀಡಿಸಿದಂತಾಗುವುದು. ಥಕ್ಕನೆ ಎಚ್ಚರವಾಗಿ ನೋಡಿದರೆ ಹಾಸಿಗೆ ಒದ್ದೆಯಾಗಿರುತ್ತಿತ್ತು. ಕಣ್ಣು ಮುಚ್ಚುವುದಕ್ಕಿಲ್ಲ-ದಿನದಿನವೂ ಇದೇ ವ್ಯಕ್ತಿಯ ಅನೇಕ ರೂಪ, ಅನೇಕ ಅವಾಂತರ.

"ಒಂದೊಂದು ದಿನ, 'ನನ್ನ ಉಂಗರ ಏಕೆ ಹಾಕಿಕೊಳ್ಳುವುದಿಲ್ಲ? ನೀನು ತಾಳಿ ಕಟ್ಟಬೇಕಿತ್ತು. ಆದರೆ ನಾನು ಕಟ್ಟಿದ್ದೇನೆ, ನಿನ್ನನ್ನು ಬಿಡುವುದಿಲ್ಲ. ನಿನಗೆ ಎಲ್ಲ ಸುಖ ಕೊಡುತ್ತೇನೆ," ಎಂದು ಹೇಳಿ ವಿಕಾರವಾಗಿ ನಗುತ್ತಿದ್ದಳು.

"ಇನ್ನು ಕೆಲವು ಬಾರಿ ಕನಸಿನಲ್ಲಿ ಬಂದು, 'ನೀನು ಕೀಳು ಕುಲದವನು. ನಿನ್ನನ್ನು ಕೂಡಿದೆ', ಇತ್ಯಾದಿ ಇನ್ನೇನನ್ನೊ ಹೇಳುವಳು.

"ನನ್ನ ಜೀವ ಭೂತದ ಸಹವಾಸದಲ್ಲಿದ್ದವನ ಜೀವ. ಎಷ್ಟೋ ದಿನಗಳು ನನಗೆ ಕಿಂಚಿತ್ತು ಕಣ್ಣಿಗೆ ನಿದ್ರೆ ಅನ್ನುವುದು ಹತ್ತುತ್ತಿರಲಿಲ್ಲ. ನಿದ್ದೆ ಬಂದಿತೊ ಬರುವುದು ಈ ಕರಾಳ, ವಿಕೃತ, ಇಲ್ಲವೆ ಮೋಹಕ ಅಥವ ಪ್ರಿಯರೂಪ. ಭಯಾನಕ ದೃಶ್ಯ. ಇಲ್ಲದಿದ್ದರೆ ರತಿಕ್ರಿಯಾ. ನನ್ನ ಗತಿ, ನನ್ನ ದೇಹಾರೋಗ್ಯ ಏನಾಗಬೇಕು ? ಹಗಲು ಹೊತ್ತು ಎಷ್ಟೊ ನಿರ್ಧಾರ ಮಾಡಿಕೊಳ್ಳುತ್ತಿದ್ದೆ - ರಾತ್ರಿ ಅವಳೊಂದಿಗೆ, ನನ್ನಲ್ಲಿ ದಯೆತೋರು ಎಂದು ಬೇಡಿಕೊಳ್ಳಬೇಕು, ಈ ರೀತಿ ಕಾಡಬೇಡ ಎಂದು ಕೇಳಿಕೊಳ್ಳಬೇಕು, ನನ್ನ ಪಾಡಿಗೆ ನನ್ನನ್ನು ಬಿಟ್ಟುಬಿಡು ಎಂದು ಅಂಗಲಾಚಬೇಕು ಇತ್ಯಾದಿ. ಆದರೆ ಕನಸಿನಲ್ಲಿ ನಾನು ಮೂಕ-ನನಗೆ ಮಾತೇ ಇಲ್ಲ. ಇರುವ ಮಾತೆಲ್ಲ ಅವಳದೆ. ಇರುವ ಮೂದಲಿಕೆ, ಆಕ್ರೋಶ, ಪ್ರಣಯ, ಮಮತೆ ಎಲ್ಲ ಅವಳದೆ. ಅವಳೆ ಅದನ್ನು ನಡೆಸುವವಳು. ನಾನು ಮಾತ್ರ ಅನುಭವಿಸುವವನು. ಅವಳ ತಿರಸ್ಕಾರ, ಕ್ರೋಧ ಎಷ್ಟು ಭಯಂಕರವೊ, ಅವಳ ಪ್ರಣಯ-ರತಿಯ ಆವೇಗವೂ ಅಷ್ಟೇ ತೀವ್ರ ಮತ್ತು ಹಾನಿಕರ. ಜೀವನದಲ್ಲಿ ನಡೆಸುವ-ಜಾಗೃತಾವಸ್ಥೆಯಲ್ಲಿ ನಡೆಸುವ ಕ್ರಿಯೆಗೂ, ಆ ಕನಸಿನ ವ್ಯಾಪಾರಗಳಿಗೂ ಪರಿಣಾಮದಲ್ಲಿ

ಏನೊಂದೂ ವ್ಯತ್ಯಾಸವಿರುತ್ತಿರಲಿಲ್ಲ. ಅವು ನನ್ನ ಪಾಲಿಗೆ ಅಷ್ಟೇ ನಿಜ. ಅಷ್ಟೇ ಪರಿಣಾಮಕಾರಿ. ಇದನ್ನು ಯಾರೊಂದಿಗೆ ಹೇಳಿಕೊಳ್ಳಲಿ. ಆಗ ಅವರಿಗೆ ಈ ಕಥೆಯೆಲ್ಲವನ್ನೂ ಹೇಳಬೇಕು. ಡಾಕ್ಟರಿಗೆ ತೋರಿಸಿದರೆ ಅವರು ಈ ಮನೋವ್ಯಾಪಾರವೊ-ಭೂತ ಕ್ರಿಯೆಯೊ-ಅದಕ್ಕೇನು ಚಿಕಿತ್ಸೆ ಮಾಡಿಯಾರು? ಗಾಢವಾಗಿ ನಿದ್ದೆ ಬರಲೆಂದು ವ್ಯಾಯಾಮ ಮಾಡುತ್ತಿದ್ದೆ. ಆದರೆ ದೇಹದ ಬಾಧೆಯಿಂದ ಇನ್ನೂ ವೃಥಾ ಶ್ರಮವಾಯಿತೆ ಹೊರತು ಗಾಢನಿದ್ದೆ ಹತ್ತಲಿಲ್ಲ. ಔಷಧಿ ಏನೂ ಉಪಯೋಗವಾಗಲಿಲ್ಲ. ಮಲಗುವ ಮೊದಲು ತಣ್ಣೀರು ಸ್ನಾನಕ್ಕೆ ಪ್ರಾರಂಭಿಸಿದೆ. ದೇಹ ಜ್ವರಕ್ಕೆ ತುತ್ತಾಗಿ, ಇನ್ನೂ ಆರೋಗ್ಯ ಕೆಟ್ಟು, ಮನಸ್ಸು ಇನ್ನೂ ಅಧೀರವಾಯಿತು.

"ನನ್ನ ಆಕಾರ, ನನ್ನ ತೂಕ ನೋಡಿಕೊಂಡರೆ ನನಗೆ ನನ್ನ ದೇಹದ ಮೇಲೆಯೆ ಅಸಹ್ಯ ಹುಟ್ಟುವಷ್ಟು ಬಳಲಿ ಒಣಗಿಹೋಯಿತು. ತಿಂದ ಅನ್ನವೂ ಜೀರ್ಣವಾಗಬಾರದೆ? ಆದರೆ ಹಗಲಿನಲ್ಲಿ ನನ್ನ ಸುತ್ತ ನಡೆಯುತ್ತಿರುವುದೆಲ್ಲ ನನಗೆ ಗೊತ್ತಾಗುತ್ತಿತ್ತು; ಅರ್ಥವಾಗುತ್ತಿತ್ತು. ಆದರೆ ಕನಸಿನ ಲೋಕದಲ್ಲಿ ನಡೆಯುವುದೇ ಬೇರೆ. ಅದು ಹೇಗಿರುತ್ತದೆಂದು ಕೇಳಿದರೆ ನನಗೆ ಹೇಳುವುದಕ್ಕೆ ಬರುವುದಿಲ್ಲ. ಅದು ಯಾವುದೋ ಬಗ, ಏನೋ ಬಗೆ.

ನನ್ನ ಜಾತಿ ವಿಚಾರ ಆಗಾಗ್ಗೆ ಹೀಯಾಳಿಸಿದಂತೆ ಆಗುತ್ತಿತ್ತು. ಒಂದು ಸಾರಿ ನಾನು ರಾತ್ರಿ ಮಲಗಿದ್ದವನು ಒಮ್ಮೆಗೆ ನಿದ್ದೆಯಲ್ಲಿ ಎದ್ದು ಹೋದೆನಂತೆ. ಎಲ್ಲೆಲ್ಲಿಯೋ ಸುತ್ತಿದ್ದೇನೆ. ಅವಳು ಬಿಳೀ ಸೀರೆ ಉಟ್ಟು, ತಲೆಕೂದಲು ಕೆಳಕ್ಕೆ ಬಿಟ್ಟು, ಅರಿಸಿನ ಕುಂಕುಮ ಹಚ್ಚಿ, ಕೆಂಪು ದಾಸವಾಳದ ಹೂ ಮುಡಿದು ನನ್ನ ಕೈ ಹಿಡಿದುಕೊಂಡು ನಡೆಸಿಕೊಂಡು ಹೋಗುತ್ತಿದ್ದಾಳೆ. ನೀರು-ನೀರಿನ ಮೇಲೆ ನಡೆದುಹೋಗುತ್ತಿದ್ದೇವೆ. ನೀರಿಗೆ ಸೋಂಕುತ್ತಿರಲಿಲ್ಲ. ಹಳ್ಳಕಲ್ಲು ಗುಡ್ಡಗಳನ್ನೆಲ್ಲ ಹಾದು ಅದೆಲ್ಲಿಗೋ ಅದೇನೋ ಜಾಗಕ್ಕೆ ಹೋಗುತ್ತಿದ್ದೇವೆ. ಅಲ್ಲೆಲ್ಲೋ ಒಂದು ಕಡೆ ಪೂಜೆಗೆ ಅಣಿ ಮಾಡಿದೆ. ಏನೇನೊ ಸಾಮಗ್ರಿ. ನನ್ನಿಂದ ಪೂಜೆ ಮಾಡಿಸುತ್ತಿದ್ದಾಳೆ. ಏನು ಪೂಜೆಯೋ ನನಗೆ ನೆನಪಿಲ್ಲ. ಇದು ನನಗೆ ಒಳ್ಳೆಯದಾಗುವುದಕ್ಕೆ, ಎಂದು ಮಾತ್ರ ಹೇಳುತ್ತಿದ್ದಾಳೆ. ನಾನು ಬರಿ ಮೈಯಲ್ಲಿದ್ದೇನೆ. ಮೈ, ಸ್ನಾನಮಾಡಿದಮೈ ಹಸಿ,

ಬಟ್ಟೆ ಹಸಿಯಾಗಿ ತಪತಪನೆ ನೀರು ಹನುಕುತ್ತಿದೆ. ಆಮೇಲೆ ಏನೋ ಆಯಿತು. ಅದೇನು, ಎಂಬುದು ನನಗೆ ಗೊತ್ತಿಲ್ಲ.

" ನನ್ನ ಶಿಷ್ಯರು ಕೆಲವರು ನನ್ನನ್ನು ಹುಡುಕಿಕೊಂಡು ಬಂದರಂತೆ. ನಾನು ಅದೆಲ್ಲೊ ಒಂದು ಹಾಳು ಗುಡಿಯಲ್ಲಿ ಕುಳಿತು ಬರಿ ಮೈಯಲ್ಲಿ ಪೂಜೆ ನಡೆಸುತ್ತಿದ್ದೆನಂತೆ. ಮಲಗಿದ್ದವನು ಹೇಗೆ ಎದ್ದು ಹೋದೆನೊ ಗೊತ್ತಿಲ್ಲ. ಮೂರು ನಾಲ್ಕು ದಿನಗಳು ಆಗಿತ್ತು ನಾನೀರೀತಿ ಮನೆ ಬಿಟ್ಟುಹೋಗಿ. ಆದರೆ ಪಾಠಶಾಲೆಗೆ ಬಂದ ವಿದ್ಯಾರ್ಥಿಗಳು ನನ್ನನ್ನು ಕಾಣದೆ, ಕೆಲವು ದಿನಗಳಿಂದ ನನ್ನ ಮನಸ್ಸು-ಮನಸ್ಸೇಕೆ? ಬುದ್ಧಿ ಎನ್ನೋಣ-ಅದು ಸರಿಯಾಗಿಲ್ಲದಿರುವುದನ್ನು ಅವರು ಗಮನಿಸಿದ್ದರು. ಪಾಠ ಸರಿಯಾಗಿ ನಡೆಯುತ್ತಲೆ ಇರಲಿಲ್ಲ: ಅದೇ ಸ್ಮರಣ, ಅದೇ ಕನಸು. ನನ್ನನ್ನು ಒಯ್ದು ಹುಚ್ಚರ ಆಸ್ಪತ್ರೆಗೆ ಸೇರಿಸಿಯೂ ಬಿಟ್ಟರು. ಆ ಬಾಳೂ ನನ್ನ ಸ್ಮೃತಿಯಲ್ಲಿ ನೆನಪಿಲ್ಲ.

" ಅಲ್ಲಿ ಎಷ್ಟು ದಿನವೊ ? ತಿಂಗಳೊ ? ಒಬ್ಬರೂ ಹೇಳರು. ಆ ವಿವರಗಳನ್ನು ಕೇಳಿದರೆ ಒಬ್ಬರೂ ಸರಿಯಾಗಿ ಹೇಳಲಿಲ್ಲ. ಆಮೇಲೆ ಅಲ್ಲಿಯೂ ಏನೊಂದೂ ಉಪಯೋಗವಾಗದೆ ಕೊನೆಗೆ ಇಲ್ಲಿಯೆ ಹತ್ತಿರದ ಒಂದು ಊರಿನಲ್ಲಿ ಒಬ್ಬ ಮಂತ್ರವಾದಿಯ ಹತ್ತಿರ ಕರೆದುಕೊಂಡು ಹೋಗಿ ತೋರಿಸಿ ಕೇಳಿಸಿದರಂತೆ.

" ಅವನು ಮಾಟ ಮಂತ್ರಮಾಡಿ,'ಕೊನೆಗೆ ಇದು ಜನ್ಮಾಂತರೀಯ,ದೇಹದೊಂದಿಗೇ ಹೋಗಬೇಕು. ಆದರೆ ಇವನಿಗೆ ಭೀತಿ, ಹೆದರಿಸುವುದು ಇತ್ಯಾದಿಗಳಾಗದಂತೆ ಕಟ್ಟು ಮಾಡಿದ್ದೇನೆ. ಆ ಮೋಹಿನಿಗೆ, ಅದು ಜೀವಮಾನದಿಂಡಿದ್ದಾಗ ಇವನಿಂದ ಅನ್ಯಾಯವಾಯಿತಂತೆ. ಅದಕ್ಕಾಗಿ ಅದು ಸತ್ತಮೇಲೆ ಈ ರೂಪದಿಂದ ಕಾಡುತ್ತಿದೆ. ಆದರೆ ಈಗ ಅದಕ್ಕೆ ಕೋಪ ಶಮನವಾಗಿ-ಈಗ ಸೌಮ್ಯ ವೇಷದಿಂದ ಬರುತ್ತೇನೆ-ಇನ್ನುಮೇಲೆ ಕ್ರೂರವಾಗಿ ಕಾಡುವುದಿಲ್ಲ, ಎಂದು ವಚನ ಕೊಟ್ಟಿದೆ. ಅದು ಬಾರದಂತೆ ಮಾಡಲು ನನಗೆ ಸಾಧ್ಯವಿಲ್ಲ. ಇನ್ನು ಯಾರಿಗೂ ಸಾಧ್ಯವಿಲ್ಲ. ಅದು ಗ್ರಹಗಳ ಪರಿಣಾಮ. ದೇಹ ಕೊನೆಯಾದರೆ ಅದು ಕೊನೆಯಾದೀತು'-ಹೀಗೆ ತಿಳಿಸಿ ಕ್ರೂರ ಬಾಧೆ

ಯಿಂದ ತಪ್ಪಿಸಿದ.

"ಕನಸು ಬೀಳುವುದು ತಪ್ಪಲಿಲ್ಲ. ಆದರೆ ಮೊದಲಿನ ಹಾಗೆ ಪ್ರಾಣ ತೆಗೆಯುವ ಕನಸುಗಳು ನಿಂತೇಹೋದವು. ಆದರೆ ಅವಳಿಗೆ ಯಾವ ಆಶೆ, ಕಾಮ, ತೃಪ್ತಿಯಾಗದೆ ಇತ್ತೊ ಅದೇ ಭಾವಗಳನ್ನು ತೃಪ್ತಿಪಡಿಸಿಕೊಳ್ಳುವ ಕನಸುಗಳು. ಈಗ ಅವಳು ಬಹಳ ಸೌಮ್ಯರೂಪದಿಂದ ಕಾಣುತ್ತಾಳೆ. ಅತಿ ಮೋಹ ಮಮತೆಯನ್ನು ತೋರಿಸುತ್ತಾಳೆ. ಬಲು ಮುದ್ದಿನ ಮರುಕದ ಮಾತನಾಡುತ್ತಾಳೆ. ಅವಳ ಸಹವಾಸ-ಅದು ಕನಸಿನಲ್ಲಿ-ಪರಮ ಸುಖದಾಯಕವೆನಿಸುತ್ತದೆ. ಆದರೆ ಅದು ಕನಸಲ್ಲ. ಕನಸಿಗೂ ಎಚ್ಚರಕ್ಕೂ ಒಂದು ಮಧ್ಯಭಾವ. ಸಂಜೆ ಹೊತ್ತಿನಲ್ಲಿ ಬೆಳಕು ಮಸಕಾಗುತ್ತ ಬಂದಾಗ, ಇನ್ನೂ ನಕ್ಷತ್ರಗಳ ಬೆಳಕು ಕಾಣದೆ-ರಾತ್ರಿ ಬೆಳೆಯದೆ ಇರುವಾಗ ಇರುವ ಮಸುಕಿನ ಮಬ್ಬು ನೋಟಕ್ಕೆ ಸ್ಪಷ್ಟವಲ್ಲ. ಬೆಳಕಿನ ಬಿಳಿ ಛಾಯೆಯಿದ್ದರೂ ಅದು ನೋಟಕ್ಕೆ ಬಹಳ ಅಸ್ಪಷ್ಟ. ಹಾಗೆ ಕನಸಿಗೂ, ಎಚ್ಚರಕ್ಕೂ ಇರುವ ಒಂದು ಮಧ್ಯಸ್ಥಿತಿ. ನಾನು ಹೇಳುವುದು ತಮಗೆ ಹೊಳೆಯಿತೆ?"

"ಹೊಳೆಯಿತು ಹೇಳಿ. ಅದನ್ನ ಇಂಗ್ಲಿಷಿನಲ್ಲಿ ಸಬ್‌ಕಾನ್‌ಷಸ್ ಎನ್ನುತ್ತಾರೆ. ಸಂಸ್ಕೃತದವರು, ಅವಸ್ಥಾತ್ರಯಗಳಲ್ಲಿ ಒಂದು—ಸುಷುಪ್ತಿ ಎನ್ನುತ್ತಾರೆ ಶಾಸ್ತ್ರದಲ್ಲಿ. ಆ ಸ್ಥಿತಿಯಲ್ಲಿ ಮನಸ್ಸು ಅಶಾಂತವಾದರೆ ಅದು ಬಹಳ ಕಷ್ಟ" ಎಂದು ಹೇಳಿದೆ.

"ನೋಡಿ ಅದೇ-ಆ ಕಾಲದಲ್ಲೇ, ಜೊಂಪು ಬಂದೀತೆಂಬ ಕಾಲದಲ್ಲೇ ಆರಂಭವಾಗುತ್ತದೆ ಆ ಭ್ರಮಾ ವಿಲಾಸ."

"ಈಗ ಅವಳ ರೂಪ ಹೇಗಿರುತ್ತದೆ?"

"ಮೊದಲ ಜೀವನದಲ್ಲಿ, ಆರೋಗ್ಯದಿಂದಿದ್ದಾಗ ಇದ್ದಂತೆ ಇರುತ್ತದೆ."

"ನಿಮಗೆ ಅವಳೊಂದಿಗೆ ಆಗ ಕನಸಿನಲ್ಲೇ ಆಗಲಿ, ಮಾತನಾಡುವುದಕ್ಕಾಗುವುದಿಲ್ಲವೊ?"

"ಇಲ್ಲ."

"ಪ್ರಯತ್ನ ಮಾಡಿದ್ದೀರೊ?"

"ಹಗಲು ಹೊತ್ತಿನ ಪ್ರಯತ್ನವೇ ಬೇರೆ-ಆದರೆ ಆ ರಾತ್ರಿಯ ಪ್ರಪಂಚವೇ ಬೇರೆ."

"ಹಗಲು ಈ ಬಗೆಯ ಕನಸು ಬೀಳುವುದಿಲ್ಲವೊ?"

"ಬೀಳುವುದಿಲ್ಲ. ಆಗಲೆ ನಾನು ಒಂದೆರಡು ಗಂಟೆ ನಿದ್ದೆ ನೆಪ ತೀರಿಸಿಕೊಳ್ಳುವುದು. ಆದರೆ ಆಗಲೂ ಮಸ್ತಕ ಕಾದು ಹೋಗಿರುತ್ತದೆ. ಏನಾದರೂ ಕೊಂಚ ಈ ವಿಚಾರ ಆಗ ಸುಳಿಯಿತೊ ಮನಸ್ಸಿಗೆ, ಆಗಲೂ ನಿದ್ದೆ ಬರುವುದಿಲ್ಲ. ಆದರೆ ಈ ವಿಚಾರ ಹೇಗೆಂದರೆ, ರೋಗಿ ಅಪಥ್ಯವನ್ನು ತಿನ್ನಬಾರದೆಂದಿದ್ದರೂ ಅದು ತನ್ನ ಮುಂದೇ ಇರುವಾಗ ತಿಂದು ರೋಗ ಹೆಚ್ಚಿಸಿಕೊಳ್ಳುವಂತೆ."

"ಆ ರಾತ್ರಿಯ ಬದುಕು, ವಿಲಾಸ ಮನಸ್ಸಿನ ಮೇಲೆ ಅಂತಹ ಅಚ್ಚಳಿಯದ ಪರಿಣಾಮ ಇಟ್ಟು ಹೋಗಿರುವುದರಿಂದ ಅದು ಯಾವಾಗಲೂ ಮನಸ್ಸಿನಲ್ಲಿ ಇದ್ದೇ ಇರುತ್ತದೆ—ನಮಗೆ ಪ್ರಿಯವಾದ ಹಾಡು ಸದಾ ಮನಸ್ಸಿಗೆ ಬರುತ್ತಿರುವಂತೆ. ಮನುಷ್ಯ ನಿಜಜೀವನದಲ್ಲಿ ಏನೇನು ಸುಖಪಡಬಹುದೊ ಅದೆಲ್ಲ ಅನುಭವಿಸುತ್ತೇನೆ; ಅದರ ಪರಿಣಾಮವೂ ಇರುತ್ತದೆ-ದೇಹದ ಮೇಲೆ, ಮನಸ್ಸಿನ ಮೇಲೆ. ಆದರೆ, ಸ್ವಾಮಿ, ಅದು ಕನಸಿನ ವ್ಯಾಪಾರ. ಹೌದೊ? ಅಲ್ಲವೊ? ಹೇಳಿ. ನನ್ನ ಗತಿ ಏನಾಗಬೇಕು? ಮನಸ್ಸಿಗೆ ಎಚ್ಚರವಾದ ಮೇಲೆ ಯಾತನೆಯಿರುತ್ತದೆ. ಆದರೆ ಅದರಲ್ಲಿ ಸುಖವೂ ಇರುತ್ತದೆ. ನೀವು ಅಂದು ಓದಿದಿರಿ—"ಆ ಮಧುರ ಯಾತನೆ ತೀವ್ರವಾಗುವುದು", ಎಂದು. ಅದು ಕನಸಿನ ವ್ಯಾಪಾರವನ್ನೆ ಕುರಿತು ಹೇಳಿದುದು. ಆ ಪದ—"ಮಧುರ ಯಾತನೆ!" ಅದೇ ಅದರ ಸ್ಪಷ್ಟವಾದ ವಿವರಣೆ. ಸ್ವಾಮಿ, ಬರೆದವನು ಅದನ್ನು ಹೇಗೆ ಬಲ್ಲ?"

"ನೋಡಿ, ಕವಿಯ ಅನುಭವ ಸ್ವಲ್ಪ ವ್ಯಾಪಕವಾಗಿರುತ್ತದೆ. ಆತ ಅನೇಕ ವಿಚಾರಗಳನ್ನು ನಿಮ್ಮಂಥ ಕೆಲವರ ಅಸಾಧಾರಣ ಅನುಭವಗಳಿಂದ

ಅರ್ಥ ಮಾಡಿಕೊಳ್ಳುತ್ತಾನೆ. ಇತರರಿಗೆ ಹೊಳೆಯಲಾಗದಿದ್ದ ಭಾವರಾಗ ಗಳು ತೀವ್ರವಾಗಿ ಭಾಸವಾಗುತ್ತವಲ್ಲದೆ, ಅವುಗಳ ಅರ್ಥ-ವಿವರಣೆ, ಭೂತಗ ನ್ನಡಿಯಲ್ಲಿ ನೋಡಿದಂತೆ ಸ್ಪಷ್ಟವಾಗುತ್ತದೆ. ಕವಿಯೂ ಕನಸಿನ ಜೀವಿ. ಅವನೂ ಕನಸು ಕಾಣುತ್ತಾನೆ."

" ನೀವು ನನಗಾಗಿ ಅದನ್ನು ಓದುವಾಗ ನನ್ನ ಕಣ್ಣಲ್ಲಿ ನೀರು ತಾನೆ ಸುರಿಯಿತು. ನಾನು ಒರೆಸಿಕೊಂಡೆ. ನಿಮ್ಮೊಂದಿಗೆ ನನ್ನ ಎದೆಬಿಚ್ಚಿ ಹೇಳ ಬೇಕೆಂದು ಸಂಕಲ್ಪ ಮಾಡಿದೆ. ಆದರೆ ನಾನು ಮಾಡಿದುದು - ಅದನ್ನು ಹೇಗೆ ಹೇಳಿಕೊಳ್ಳುವುದು? ಮನಸ್ಸಿನಲ್ಲಿ ಎಂತಹ ಹೊಯ್ದಾಟವಾಯಿತೊ ? ನನ್ನ ಶಿಷ್ಯರು ಕೆಲವರಿಗೆ ಗೊತ್ತಿದೆ. ನೀವು ಇದಕ್ಕೇನಾದರೂ ಉಪಾಯ ಹೇಳಬಲ್ಲಿರಾ? ನಿಮ್ಮನ್ನು ಕೇಳುತ್ತೇನೆ. ಅದು ಸುಖ. ಆದರೆ ಕನಸಿನ ಸುಖ. ಆ ಆಶೆ, ಪೂರ್ಣವಾಗದ ಆಶೆ, ಕನಸು ತಿಳಿಯಾದ ಮೇಲೆ ಹೆಚ್ಚಾಗು ತ್ತದೆಯೇ ಹೊರತು ಕಡಿಮೆಯಾಗುವುದಿಲ್ಲ. ಅದಕ್ಕಾಗಿ ಮದುವೆಮಾಡಿ ಕೊಳ್ಳಬೇಕೆಂದಿದ್ದೇನೆ."

" ದೇವನಾಥ್ ಕೇಳಿ, ಜೀವನದಲ್ಲಿ ಅನೇಕರು ಆದರ್ಶಕ್ಕೋಸ್ಕರ ತ್ಯಾಗ ಮಾಡಿದ್ದಾರೆ; ಗೃಹಸ್ಥ ಜೀವನವನ್ನು ತೊರೆದೊ ಇಲ್ಲವೆ ಅದರ ಗೋಜಿಗೆ ಹೋಗದೆ ಕೇವಲ ಏಕಾಂಗರಾಗಿ, ನಿಷ್ಠೆಯಿಂದ ಶೀಲ ಕಾಯ್ದುಕೊಂಡು ತಮ್ಮ ಆದರ್ಶವನ್ನು ಗಳಿಸಿದ್ದಾರೆ. ಅವರನ್ನು ಬಿಡಿ. ಕವಿಗಳೂ ಕಲಾವ ತಂಸರೂ ಹಾಗೆಯೇ ತಮ್ಮ ಪ್ರತಿಭೆಗೆ ನೆರಳಾಗಿ ಅನುಯಾಯಿಗಳಾಗಿ ಪ್ರಿಯ- ಪ್ರೇಯಸಿ, ಭಾವದಿಂದ ಸ್ಫೂರ್ತಿ ಹೊಂದಿ ಕಲಾ ಜೀವನ ನಡೆಸಿದ್ದಾರೆ. ನಿಮ್ಮಲ್ಲಿ ಮೋಹಗೊಂಡು, ನಿಮಗಾಗಿ ಪ್ರಾಣ ಕಳೆದುಕೊಂಡು, ಕನಸಿನಲ್ಲಿಯೂ ಕನಸಿನ ವ್ಯಾಪಾರದಲ್ಲಿಯೂ ನಿಮ್ಮನ್ನು ಬಿಡದೆ ಇರುವ ಆ ನಿರ್ಭಾಗ್ಯಳ ನೆನಪಿ ಗಾಗಿ, ಅವಳ ಪ್ರೇಮವೇ ಸಾಕು, ಅವಳ ಸಹಚರಿಯೇ ಸ್ವರ್ಗ, ಇದೇ ಈಶ್ವರ ಸಂಕೇತ, ಎಂದು ಸುಮ್ಮನಿರಬಾರದೆ ? ಇದರಲ್ಲಿಯೇ ತೃಪ್ತರಾಗ ಬಾರದೆ? ಕನಸಿನಲ್ಲಿ ದೊರೆತ ಸುಖ ಜೀವನದಲ್ಲಿ ದೊರೆಯದಲ್ಲ ಎಂಬ ಹಂಬಲ, ಅದಕ್ಕಾಗಿ ಜನರನ್ನು ಕೇಳುವುದು-ಅವರ ಅಪಹಾಸ್ಯಕ್ಕೆ ಗುರಿಯಾಗುವುದು- ಇದೆಲ್ಲ ಏಕೆ?"

"ನೀವು ಹೇಳಿದಂತೆ ಇರಬಲ್ಲ ನಿಗ್ರಹ ನನಗಿಲ್ಲ. ಹಾಗಿದ್ದಿದ್ದರೆ ಈ ಗತಿಯೇಕೆ? ಅವಳೇ ಈಚಿಗೆ ಹೇಳುತ್ತಾಳೆ ಕನಸಿನಲ್ಲಿ–'ನೀನು ಮದುವೆ ಮಾಡಿಕೊ. ಬೇರೆಯವಳೊಂದಿಗೆ ನೀನು ಸೇರುತ್ತಿ, ಎಂಬ ಹೊಟ್ಟೆಯುರಿಯಿಲ್ಲ. ನಾನೆ ಅವಳ ದೇಹದಲ್ಲಿ ಪ್ರವೇಶಿಸಿ ನಿನಗೆ ಕೊಡುತ್ತಿರುವ ಸುಖ ಮತ್ತು-ನಿನ್ನಿಂದ ಪಡೆಯುವ ಸುಖ ನಾನು ಅನುಭವಿಸುತ್ತೇನೆ. ನಿನ್ನನ್ನು ಬಹಳ ಕಾಡಿದ ಪಾಪಿ-ದೆವ್ವ-ಅದಕ್ಕೆ ಪ್ರಾಯಶ್ಚಿತ್ತ ಮಾಡಿಕೊಳ್ಳುತ್ತೇನೆ. ನೀನೊಬ್ಬಳು ಉತ್ತಮ ಹೆಂಗಸನ್ನು ಮದುವೆಯಾಗು' ಎಂದು. ಆದರೆ ಉತ್ತಮ ಸಂಸ್ಕಾರ, ಕುಲ, ರೂಪ ಇರುವವರೆಲ್ಲಿ? ಅದಕ್ಕಾಗಿ ಬ್ರಾಹ್ಮಣರಲ್ಲಿ ಸಿಕ್ಕಬಹುದೇನೊ, ಎನ್ನಿಸುತ್ತದೆ.

"ಅಲ್ಲದೆ ಸ್ವಾಮಿ, ಅಂಥ ಶ್ರೇಷ್ಠ ಹೆಣ್ಣಿನ ಸಂಗಮಾಡಿ ಈಗ ಕೀಳು ಸಹವಾಸಕ್ಕೆ ಮನಸ್ಸು ಹಿಂಜರಿಯುತ್ತದೆ. ಅವಳೂ ಬೇಡವೆನ್ನುತ್ತಾಳೆ. ನನ್ನ ಮನಸ್ಸಿನಲ್ಲಿರುವುದನ್ನೆಲ್ಲ ಅವಳೇ ಗ್ರಹಿಸುತ್ತಾಳೆ. ಅವಳೆ ಅದಕ್ಕೆ ಸಮಾಧಾನ ಹೇಳುತ್ತಾಳೆ. ತನಗೆ ನನ್ನ ಯೋಚನೆಯೆಲ್ಲ ಕನ್ನಡಿಯಲ್ಲಿ ಕಂಡಂತೆ ಕಾಣುತ್ತವಂತೆ. ನಾನು ಬಹಳ ದುರ್ದೈವಿ. ಆದರೆ ನಾನೇನು ಮಾಡಲಿ?"

ಇವನಿಗೆ ಹಿಡಿದಿರುವ ಈ ಮೋಹಿನೀ ಕಾಟದ ಜೊತೆಗೆ ಇರುವ ಈ ಉತ್ತಮ ಹೆಣ್ಣಿನ ಮೋಹಕ್ಕೇನು ಹೇಳೋಣ? ಬ್ರಾಹ್ಮಣ ಕನ್ನೆ ಬೇಕಂತೆ-ಅವಳೆ ಈ ಹೊಸಬಳ ದೇಹ ಪ್ರವೇಶಿಸುತ್ತಾಳಂತೆ. ಇದೇನು ಈ ಅಪಲಾಪ? ಅಲ್ಲದೇ ತಾನು ಬ್ರಾಹ್ಮಣನಂತೆ. ಇವನು ಹುಚ್ಚನೊ? ಭ್ರಮಿತನಾದ ಬೆಪ್ಪನೊ? ಇಲ್ಲವೆ ಇವನದೆಲ್ಲ, ಇವನು ಹೇಳುವುದೆಲ್ಲ ಬರೀ ಸುಳ್ಳೊ? ಏನೇನೊ ಮನಸ್ಸಿಗೆ ಬಂದುಹೋಯಿತು.

ಜನರೊಂದಿಗೆ ಹೀಗೆ ಆಡಿಕೊಂಡರೆ ಜನ ಸುಮ್ಮನಿದ್ದಾರೆ? ಇವನ ವಿದ್ಯೆಗೆ ಪ್ರೋತ್ಸಾಹ ದೊರೆತೀತೆ? ಜೀವನಕ್ಕೆ ಏನು ಮಾಡುತ್ತಾನೆ? ಅದಕ್ಕೆ ಸರಿಯಾಗಿ ಈಚೆಗೆ ಇವನ ಹುಚ್ಚು ಪ್ರಬಲವಾದಮೇಲೆ ಇವನಿಗಿದ್ದ ಶಿಷ್ಯರ ಸಂಖ್ಯೆ ಕಡಿಮೆಯಾಯಿತು. ಅದೇ ಇದಕ್ಕೆ ಕಾರಣವಿರಲಾರದು. ಇನ್ನೂ

ಅನೇಕ ಜನರು ಬಂದು ಪಾಠಶಾಲೆ ತೆರೆದಿದ್ದಾರೆ. ಕೇವಲ ಅದೊಂದು ಮನೋರಂಜನೆಗಾಗಿ ಕಲಿಯುವವರೇ ಹೊರತು ಅದನ್ನು ವೃತ್ತಿಯಾಗಿ ಇಟ್ಟು ಕೊಳ್ಳುವ ಜನರಲ್ಲ. ಇವನಿಗೆ ಈಗ ಬರುತ್ತಿರುವ ವರಮಾನ ಇವನ ಅಂಗಡಿ ಗಳಿಂದ. ಆದರೆ ಇವನ ಅಭಿಪ್ರಾಯ ಇದೇ ರೀತಿ ಹುಚ್ಚುತನದಿಂದ ಕೂಡಿ ತನಗೆ ಮೀರಿದ ಆಶೆ, ಆಕಾಂಕ್ಷೆ, ಭ್ರಮೆ, ಸುಳ್ಳುಕಂತೆ ಪುರಾಣವಾದರೆ ಯಾರು ಪುರಸ್ಕರಿಸುತ್ತಾರೆ? ಇವನಿಗಿರುವ ಸ್ಥಿತಿಯಲ್ಲಿ ಈ ಹುಚ್ಚು ಮದುವೆ ಯಾದಲ್ಲದೆ ಬಿಡುವುದಿಲ್ಲ; ಬಿಟ್ಟಲ್ಲದೆ ಮದುವೆಯಾಗುವುದಿಲ್ಲ!

ಇವನ ವಯಸ್ಸು ನಲವತ್ತು ಮೀರಿದೆ. ಆದರೆ ತನಗಿನ್ನು ಮೂವತ್ತೆರಡು ಎನ್ನುತ್ತಾನೆ. ಇವನ ಮಾತಿನಿಂದಲೆ ಇವನ ವಯಸ್ಸಿನ ಲೆಖ್ಖ ಹಾಕಬಹುದು. ಇಂತಹ ಹುಚ್ಚರೂ ಇದ್ದಾರಲ್ಲ ಪ್ರಪಂಚದಲ್ಲಿ!

ಆದರೆ ಹೀಗಿದ್ದರೂ ಮನುಷ್ಯ ಸ್ನೇಹದ ಸ್ವಭಾವದವನು. ಉಪಕಾರಿ-ಉದಾರಿ. ಬಡವರಿಗೆ, ಅನಾಥರಿಗೆ, ರೋಗಪೀಡಿತರಿಗೆ, ವಿದ್ಯಾರ್ಥಿಗಳಿಗೆ ಅವನಿಂದ ಸಹಾಯ ಬಹಳ. ಅಂತೂ ಇವನೊಂದು ಸಮಸ್ಯೆಯೇ ಆಗಿ ಉಳಿದು ಬಿಟ್ಟ.

ನಾನು ಹೇಳಬಹುದಾದಷ್ಟು ವಿವೇಕ ಹೇಳಿದೆ: ಅಲ್ಲಲ್ಲಿ, ನಿಮ್ಮ ಜನ ದಲ್ಲೆ ನೋಡಿ; ಈಗ ವಿದ್ಯೆ ಎಲ್ಲ ಕಡೆಗೂ ಹಬ್ಬಿದೆ. ಸುಧಾರಿಸಿದ ಜನ ಸಿಕ್ಕ ಬಹುದು; ನಿರಾಶೆ ಬೇಡ, ಇತ್ಯಾದಿ. ಆದರೆ ವಯಸ್ಸು ಮೀರುತ್ತಿದೆ. ಯೌವನ ಎಂದೋ ಹೋಯಿತು. ಅದರೊಂದಿಗೆ ಹರ್ಷ, ಉತ್ಸಾಹ, ಆಕಾಂಕ್ಷೆ ಎಲ್ಲ ಭಸ್ಮವಾದವು. ಇಂಥ ಮನುಷ್ಯ, ಯಾವ ಸಾರ್ಥಕಕ್ಕೆ ಮದುವೆ ಮಾಡಿಕೊಳ್ಳ ಬೇಕೆನ್ನುತ್ತಾನೆ?

ಹೀಗೆ ಎಂಟು ವರ್ಷಗಳು ಕಳೆದವು. ನಾನೆಲ್ಲಿಯೊ ಸುತ್ತಿ, ಸುತ್ತಿ ಮರಳಿ ಬಂದ ಮೇಲೆ ಎಂದೊ ಒಂದು ದಿನ ಈತನ ನೆನಪಾಯಿತು.

ಇವನು ಮೊದಲಿದ್ದ ಸ್ಥಳಕ್ಕೆ ಹೋಗಿ ವಿಚಾರಿಸಿದುದರಲ್ಲಿ ಅವನಾಗ ಅಲ್ಲಿರಲಿಲ್ಲ. ಅದನ್ನೆಲ್ಲ ಮಾರಿದನಂತೆ. ಇನ್ನೆಲ್ಲಿಯೊ ಹೇಳಿದರು. ಹೋಗಿ

ವಿಚಾರಿಸಿದ್ದರಲ್ಲಿ ಅದೊಂದು ಪಾಳು ನಿವೇಶನ. ಅಲ್ಲಿ ಗುಡಿಸಲಿನಂಥ ಒಂದೆರಡು ಮನೆಗಳು. ಅಲ್ಲೊಂದು ಮೋಟಾರು ತೊಳೆಯುವ, ಸಣ್ಣ ಪುಟ್ಟ ರಿಪೇರಿ ನಡೆಸುವ ಷೆಡ್.

ಸಂಗೀತಗಾರ ದೇವನಾಥ್ ಈಗ ಮೋಟಾರು ಮೆಕ್ಯಾನಿಕ್ ದೇವನಾಥ್. ಹೀಗೂ ಆಗಬಹುದೆ? ಆ ಗುಡಿಸಲುಗಳಂತಹ ಮನೆಯಲ್ಲಿ ವಿಚಾರಿಸಿದೆ. ಒಳಗಡೆ ಕೊಂಚ ಅಚ್ಚುಕಟ್ಟಾಗಿಯೆ ಇತ್ತು. ಇಪ್ಪತ್ತೈದಕ್ಕೆ ಮೀರಿದ ಹೆಂಗಸೊಬ್ಬಳು ಬಂದಳು. "ಯಾರನ್ನು ನೋಡಬೇಕಿತ್ತು?" ಎಂದು ಕೇಳಿದಳು. ತಿಳಿದುಕೊಂಡು, "ಅವರಿಲ್ಲ; ಊಟದ ಹೊತ್ತು–ಈಗ ಬರಬಹುದು–ತಾವು ಯಾರೆಂದು ತಿಳಿಸಬೇಕು?" ಎಂದಳು.

"ನೀವು ಯಾರೆಂದು ನನಗೆ ತಿಳಿಸಿದರೆ–ನಾನು ಹೇಳಿಯೇನು," ಎನ್ನಬೇಕೆಂದಿದ್ದೆ. ಏಕೆಂದರೆ ಯಾರು ಬಲ್ಲರು ಭೂತವೇ ಅಲ್ಲಿ ಸುಳಿದಿತ್ತೊ?

ನನ್ನ ಹೆಸರನ್ನು ಹೇಳಿದೆ.

"ಓ!" ಎಂದು ಅತಿ ಸಂಭ್ರಮ ವಿಶ್ವಾಸದಿಂದ "ಬನ್ನಿ, ಕೂಡಿ. ಈಗ ಬರಬಹುದು", ಎಂದಳು.

"ನೀವು ಯಾರು?" ಎಂದೆ. ಮರುಕ್ಷಣದಲ್ಲಿ, "ದೇವನಾಥರಿಗೆ ನೀವೇನಾಗಬೇಕು?" ಎಂದು ಕೇಳಿದೆ.

ಆಕೆ ಲಜ್ಜೆಗೊಂಡಳು. ಅವಳ ಆ ಇರವು ಕಮನೀಯವಾಗಿತ್ತು. ಸುತ್ತಲೂ ನೋಡಿದೆ. ಇಬ್ಬರೂ ಕೂಡಿ ನಿಂತಿದ್ದ ಬಿಂಬ ಚಿತ್ರ. ಇನ್ನೊಂದು ಕಡೆ ಒಂದು ಕೂಸಿನ ಚಿತ್ರ. ಸರಿ, ಭೂತ ಅಲ್ಲವಷ್ಟೆ! ಸಂಶಯ ಹೋಗಲಿಲ್ಲ.

ಹಾಗೆ ನಿಂತಂತೆಯೇ ಹೊರಗಿನಿಂದ ದೇವನಾಥ ಬಂದ. ಥಟ್ಟನೆ ನನ್ನನ್ನು ಗುರುತಿಸಿ, ತನ್ನ ಎರಡು ಕೈ ಜೋಡಿಸಿ ನನ್ನ ಎರಡು ಕೈಗಳನ್ನು ಹಿಡಿದುಕೊಂಡ. "ಈಕೆ ನನ್ನ ಹೆಂಡತಿ; ಹೋದ ವರ್ಷ ಮದುವೆಯಾಯಿತು. ಲಗ್ನಪತ್ರ ಕಳಿಸಿದ್ದೆ" ಎಂದ.

"ನನಗೆ ತಲುಪಲಿಲ್ಲ".

ಈ ಬಾರಿ ಅವನನ್ನು ಏನೊಂದೂ ಕೇಳಲಿಲ್ಲ. ಕೇಳಬಹುದಾದ ಮೂರು ಪ್ರಶ್ನೆಗಳಿದ್ದವು. ಸಂಗೀತಗಾರ ಹೇಗೆ ಮೋಟಾರು ಮೆಕ್ಯಾನಿಕ್ ಆದ ?– ಅದೊಂದು. ಈ ಹೆಂಡತಿಯ ಜಾತಿ ಯಾವುದು ? ಎಂಬುದು ಇನ್ನೊಂದು. ಇವಳ ದೇಹದಲ್ಲಿ ಆ ಮೋಹಿನಿ ಮೊದಲ ಹೆಂಡತಿಯ ಆತ್ಮ–ಸ್ಪಿರಿಟ್ ಪ್ರವೇಶಮಾಡಿದೆಯೆ ? ಮತ್ತು ತನಗೀಗ ಆಕೆಯಿಂದ ಬಾಧೆ-ಮೋಹಜ ಆಗುತ್ತಿಲ್ಲವೆ ? ಇವೇ ಮೂರು ಪ್ರಶ್ನೆ.

ಮನುಷ್ಯ ಇನ್ನೂ ವಯಸ್ಕನಾದಂತೆ ಕಾಣುತ್ತಾನೆ. ಕೂದಲೆಲ್ಲ ಬಿಳಿಯಾಗಿವೆ. ಹೆಂಡತಿಯಿದ್ದಾಳೆ. ಮಗುವಾಗಿದೆ. "ಏನೋ ತಮ್ಮ ಹರಕೆಯಿಂದ ಈಗ ನೆಮ್ಮದಿಯಿಂದಿದ್ದೇನೆ", ಎನ್ನುತ್ತಾನೆ.

"ಅಂತೂ ನೀವು ಬಹಳ ಬಳಲಿದಿರಿ", ಎಂದೆ.

"ಶ್ರೀರಾಮರ ಕೃಪೆ".

"ಒಂದು ಗಾದೆಯಿದೆ ಇಂಗ್ಲಿಷಿನಲ್ಲಿ–ಹೆವನ್ ಈಸ್ ಹಿಯರ್ ಫಾರ್ ದೋಸ್ ಹೂ ವೆಯ್ಟ್. (ತಾಳ್ಮೆಯಿಂದ ಸಹಿಸಿ ನಿರೀಕ್ಷಿಸಿದವರಿಗೆ ಸ್ವರ್ಗ ಇಲ್ಲಿಯೆ ಸಿಗುತ್ತದೆ) ನಿಮಗೆ ಒಳ್ಳೆಯದಾಯಿತು".

"ನನ್ನ ಹೆಂಡತಿಯಿಂದ ನನ್ನ ಸಂಸಾರ ಜೀವನ ಸುಖವಾಗಿದೆ. ಅವಳೆದುರಿನಲ್ಲಿ ಈ ಮಾತು ಹೇಳಲು ನನಗೆ ಸಂಕೋಚವಿಲ್ಲ", ಎಂದು ಅವಳನ್ನು ನೋಡಲು ತಿರುಗಿದ.

ಅವಳು ಮುಖ ಅತ್ತ ತಿರುಗಿಸಿಕೊಂಡು ಹೊರಡುವುದರಲ್ಲಿದ್ದಳು.

"ವೇಣು, ಮಗುವನ್ನೆತ್ತಿಕೊಂಡು ಬಾ", ಎಂದ.

"ಇದು ಯಾವ ವೇಣು ?" ಎಂದೆ.

"ಮದುವೆಯಲ್ಲಿ ಇವಳ ಹೆಸರನ್ನು ಬದಲಾಯಿಸಿದೆ."